ಶ್ರೀ

ಶ್ರೀ ಲಕ್ಷ್ಮೀಹಯವದನ ಪರಬ್ರಹ್ಮಣೇ ನಮಃ

ಅಸ್ಮದ್ಗುರು ಪರಂಪರಾಯೈ ನಮಃ



ಶ್ರೀಮನ್ನಿಗಮಾಂತ ಮಹಾದೇಶಿಕರವರು ಅನುಗ್ರಹಿಸಿದ

# ಶ್ರೀಮದ್ರಹಸ್ಯತ್ರಯಸಾರಃ

(ಮೊದಲನೆಯ ಭಾಗ)

**ಸರಗೂರು ಮಾಡಭೂಷಣಂ ಕೃಷ್ಣಮಾಚಾರ್ಯರಿಂದ**

ರಚಿತವಾದ **"ಸಾರಚಂದ್ರಿಕಾ"** ವ್ಯಾಖ್ಯಾನ ಸಮೇತ

ಪ್ರಕಾಶಕರು :

**ಶ್ರೀ ವೈಷ್ಣವ ಸಭಾ (ರಿ)**

ಲಕ್ಷ್ಮೀ ನರಸಿಂಹಸ್ವಾಮಿ ದೇವಸ್ಥಾನ

3ನೇ ಮುಖ್ಯರಸ್ತೆ, ಪ್ರಕಾಶನಗರ

ಬೆಂಗಳೂರು – 560 021

**ಪ್ರಮೋದೂತಸಂ, ಮೇಷ ಮಾಸ**

**ಶುಕ್ಲ, ಅರಿಪ್ರಾ–29–4–1990**

**ಬೆಲೆ : ರೂ. 40–00**

[ಅಂಚೆ ವೆಚ್ಚ ಬೇರೆ]

ಶ್ರೀ

ಶ್ರೀ ಲಕ್ಷ್ಮೀಹಯವದನ ಪರಬ್ರಹ್ಮಣೇ ನಮಃ

ಅಸ್ಮದ್ಗುರು ಪರಂಪರಾಯೈ ನಮಃ



ಶ್ರೀಮನ್ನಿಗಮಾಂತ ಮಹಾದೇಶಿಕರವರು ಅನುಗ್ರಹಿಸಿದ

# ಶ್ರೀಮದ್ರಹಸ್ಯತ್ರಯಸಾರಃ

(ಮೊದಲನೆಯ ಭಾಗ)

**ಸರಗೂರು ಮಾಡಭೂಷಣಂ ಕೃಷ್ಣಮಾಚಾರ್ಯರಿಂದ**

ರಚಿತವಾದ **"ಸಾರಚಂದ್ರಿಕಾ"** ವ್ಯಾಖ್ಯಾನ ಸಮೇತ

ಪ್ರಕಾಶಕರು ·

**ಶ್ರೀ ವೈಷ್ಣವ ಸಭಾ (ರಿ)**

ಲಕ್ಷ್ಮೀ ನರಸಿಂಹಸ್ವಾಮಿ ದೇವಸ್ಥಾನ

3ನೇ ಮುಖ್ಯರಸ್ತೆ, ಪ್ರಕಾಶನಗರ

ಬೆಂಗಳೂರು – 560 021

**ಪ್ರಮೋದೂತಸಂ, ಮೇಷ ಮಾಸ**

ಶುಕ್ಲ, ಆರಿದ್ರಾ–29–4–1990

**ಬೆಲೆ : ರೂ. 40–00**

[ಅಂಚೆ ವೆಚ್ಚ ಬೇರೆ]

ಶ್ರೀಮತೇ ಲಕ್ಷ್ಮೀನೃಸಿಂಹ ಪರಬ್ರಹ್ಮಣೇ ನಮಃ
ಅಸ್ಮದ್ಗುರು ಪರಂಪರಾಯ್ಯೈ ನಮ ಃ

**ಶ್ರೀ ವೈಷ್ಣವಸಭಾ (ರಿ)**

ಪ್ರಕಾಶನಗರ, 3ನೇ ಮುಖ್ಯ ರಸ್ತೆ, ಲಕ್ಷ್ಮೀನರಸಿಂಹ ಸ್ವಾಮಿ ದೇವಸ್ಥಾನ
ಬೆಂಗಳೂರು-560 021

ಆಸ್ತಿಕ ಮಹಾಶಯರಲ್ಲಿ ವಿನಂತಿ.

ಈ ಸಭೆಯು ಸ್ಥಾಪಿತವಾಗಿ ಇಲ್ಲಿಗೆ ಇಪ್ಪತ್ತು ವರ್ಷಗಳಾಗಿವೆ ಸಭೆಯವರು ಬೆಂಗಳೂರು ಪ್ರಕಾಶನಗರದಲ್ಲಿ ಲಕ್ಷ್ಮೀನೃಸಿಂಹ ಸ್ವಾಮಿಯವರ ದೇವಸ್ಥಾನವನ್ನು ನಿರ್ಮಿಸಿ, ಪೂಜಾವಗ್ಯೆರೆಗಳನ್ನು ನಡೆಸಿ ಬರುತ್ತಿರುವುದೂ ಹಾಗೆಯೇ ವೈದಿಕಾಶ್ರಮವನ್ನು ನಿರ್ಮಿಸಿ ಆಸ್ತಿಕ ಜನರಿಗೆ ಶುಭ ಮತ್ತು ವೈದಿಕ ಕಾರ್ಯಗಳನ್ನು ನಡೆಸಲು ಸಹ ಕರಿಸುತ್ತಿರುವುದೂ ಸರ್ವವೇದ್ಯ. ಸಭೆಯ ಆಶ್ರಯದಲ್ಲಿ ವಿದ್ಯಾರ್ಥಿಗಳಿಗೆ ಸಂಸ್ಕೃತ, ವೇದ ಪ್ರಬಂಧಗಳನ್ನು ಹೇಳಿ ಕೊಡುತ್ತಿದ್ದೇವೆ ಅಂತೆಯೇ ಆಸ್ತಿಕ ಜನರ ಉಪಯೋಗಕ್ಕಾಗಿ, ಪೂರ್ವಾಪರ ಪ್ರಯೋಗಗಳನ್ನೂ ಶ್ರೀ ವೈಷ್ಣವ ದಿನಚರಿ ಮತ್ತು ಶ್ರಾದ್ಧ ಪ್ರಯೋಗಗಳನ್ನೂ ಅಚ್ಚು ಹಾಕಿಸಿ ಪ್ರಚುರ ಪಡಿಸಿದ್ದೇವೆ ಇದಕ್ಕೆ ಹಲವಾರು ಧರ್ಮ ಸಂಸ್ಥೆಗಳ ದ್ರವ್ಯ ಸಹಾಯವು ನೆರವಾಗಿದೆ.

ಮೇಲೂ, ಶ್ರೀಮದ್ರಾಮಾಯಣ, ಭಗವದ್ಗೀತೆ, ತಿರುಪ್ಪಾವೈ, ಶ್ರೀ ಭಾಷ್ಯಾದಿ, ಸದ್ಗ್ರಂಥಗಳ ವಿಷಯವಾದ, ಉಪನ್ಯಾಸಗಳನ್ನೂ, ಕಾಲಕ್ಷೇಪಾದಿಗಳನ್ನೂ ಸಭೆಯು ನಡೆಸಿಬರುತ್ತದೆ. ಅನೇಕ ಆಸ್ತಿಕರು ಮುಂದೆ ಬಂದು ಇವುಗಳಲ್ಲಿ ಭಾಗವಹಿಸುತ್ತಿದ್ದಾರೆ

ಪ್ರಕೃತ ಆಸ್ತಿಕರನೇಕರ ಪ್ರೇರಣೆಯ ಮೇರೆ, ಶ್ರೀ ವೈಷ್ಣವರಿಗೆ ಪರಮೋಪಾದೇಯವಾದ ಶ್ರೀ ಮದ್ರಹಸ ತ್ರಯ ಸಾರವೆಂಬ ಗ್ರಂಥರತ್ನವನ್ನು ಸವ್ಯಾಖ್ಯಾನ ಕನ್ನಡದಲ್ಲಿ ಅಚ್ಚಿಟ್ಟು ಪ್ರಕಾಶ ಪಡಿಸಲು ಸಂತೋಷಿಸುತ್ತೇವೆ ಪ್ರತಿಯೊಬ್ಬ ಶ್ರೀ ವೈಷ್ಣವರೂ ಮುಂದೆ ಒಂದು ಶ್ರೀಮನ್ನಿಗಮಾಂತ ಮಹಾದೇಶಿಕ ಪ್ರಣೀತವಾದ ಈ ಗ್ರಂಥ ರತ್ನ ವನ್ನು ಕೊಂಡು ಕೊಂಡು ಸದಾಚಾರ್ಯರಲ್ಲಿ ಕಾಲಕ್ಷೇಪ ಮಾಡಿ ಆತ್ಮೋಜ್ಜೀವನವನ್ನು ಪಡೆದರೆ ನಮ್ಮ ಪ್ರಯತ್ನವು ಸಫಲವಾಗುತ್ತದೆ. ವರ್ಣಾಶ್ರಮ ವ್ಯತ್ಯಾಸವಿಲ್ಲದೆ ಸರ್ವರೂ ಅಧಿಕರಿಸಿ ಜ್ಞಾನಸಂಪಾದನೆ ಮಾಡಿಕೊಂಡು ಭಗವ ತ್ಪಾದಾರವಿಂದಗಳಲ್ಲಿ ಶರಣಾಗತಿ ಮಾಡಿ ಇದೇ ಜನ್ಮದಲ್ಲಿ ಮುಕ್ತಿ ಪಡೆಯಲು ಸಹಕರಿಸುವ ಪರಮೋಪಾದೇಯ ಗ್ರಂಥ ರತ್ನವಿದು

ಈ ಗ್ರಂಥರತ್ನಕ್ಕೆ ಸುಂದರವಾದ ವ್ಯಾಖ್ಯಾನವನ್ನು ಬರೆದು ಇದನ್ನು ಅಚ್ಚಿಟ್ಟು ಸಹಕರಿಸಿದ ಸರಗೂರು ಮಾಡ ಭೂಷಣಂ ಕೃಷ್ಣಮಾಚಾರ್ಯರವರಿಗೆ ಸಭೆಯು ತನ್ನ ಕೃತಜ್ಞತೆಯನ್ನು ವ್ಯಕ್ತಪಡಿಸುತ್ತದೆ. ಇದಕ್ಕೆ ದ್ರವ್ಯ ಸಹಾಯ ನೀಡಿದ ಮತ್ತು ಗ್ರಂಥ ವಿಷಯವಾಗಿ ಶುಭಾಶಯಗಳನ್ನು ನೀಡಿರುವ ಮಠಾಧಿಪತಿಗಳಿಗೂ, ಮಹನೀಯರುಗಳಿಗೂ ನಮ್ಮ ಹೃತ್ಪೂರ್ವಕ ವಂದನೆಗಳು

ಈ ಗ್ರಂಥವನ್ನು ಅಚ್ಚಿಟ್ಟು ಪ್ರಕಾಶ ಪಡಿಸಲು ಇದುವರೆಗೆ ದ್ರವ್ಯ ಸಹಾಯ ಮಾಡಿ ಉಪಕರಿಸಿದ ಮಹನೀಯರುಗಳು ಮತ್ತು ಸಂಸ್ಥೆಗಳು

| | | |
|---|---|---|
| | | ರೂ. ಪೈ. |
| 1 | ಶ್ರೀ ಬ್ರಹ್ಮತಂತ್ರ ಸ್ವತಂತ್ರ ಪರಕಾಲ ಮಠಾಧೀಶರಾಗಿ ಈಗ ವಿರಾಜಿಸುತ್ತಿರುವ ಶ್ರೀ. ಉಭ. ವೇ. ಪರಮಹಂಸ ಶ್ರೀ ಮದಭಿನವರಾಮಾನುಜ ಬ್ರಹ್ಮತಂತ್ರ ಪರಕಾಲ ಮಹಾಸ್ವಾಮಿಗಳು | 25 000 00 |
| 2 | ಸನಾತನ ಧರ್ಮಸಭಾ ಸರಗೂರು, ಮೈಸೂರು ಡಿಸ್ಟ್ರಿಕ್ಟ್ | 12 000.00 |
| 3 | ಶ್ರೀ ತಿರುಮಲ ತಿರುಪತಿ ದೇವಸ್ಥಾನದ ಅಧಿಕಾರಿಗಳು | 10 000 00 |
| 4. | ಶ್ರೀ ವೈಷ್ಣವ ಸಭಾ, ಪ್ರಕಾಶನಗರ, ಬೆಂಗಳೂರು-21 | 10.000.00 |
| | | 57.000 00 |

ಈ ಶ್ರೀಕೋಶವನ್ನು ಪೂರ್ಣವಾಗಿ ಮುದ್ರಿಸಲು ರೂ 1,10,000.00ಗಳು ಬೇಕಾಗುತ್ತವೆ ಶ್ರೀ ಮನ್ನಿಗಮಾಂತ ಮಹಾದೇಶಿಕರವರು ಅನುಗ್ರಹಿಸಿರುವ, ಇತರ ಸಂಪ್ರದಾಯ ಗ್ರಂಥಗಳನ್ನೂ ಅಚ್ಚಿಡಲು ಸಭೆಯು ತೀರ್ಮಾನಿಸಿದ. ದಾನಿಗಳು ಮತ್ತು ಧರ್ಮ ಸಂಸ್ಥೆಗಳು ಮುಂದೆ ಬಂದು ದ್ರವ್ಯ ಸಹಾಯ ಮಾಡಿ ಸಹಕರಿಸಬೇಕೆಂದು ವಿನಯಪೂರ್ವಕವಾಗಿ ಪ್ರಾರ್ಥಿಸುತ್ತೇವೆ

ಪ್ರೀಯತಾಂ ಭಗವಾನ್ ವಾಸುದೇವಃ

ಕಾರ್ಯಕಾರಿ ಸಮಿತಿ
**ಶ್ರೀ ವೈಷ್ಣವ ಸಭಾ (ರಿ)**

ಪ್ರಕಾಶನಗರ, ಲಕ್ಷ್ಮೀನರಸಿಂಹ
ಸ್ವಾಮಿ ದೇವಸ್ಥಾನ, ಬೆಂಗಳೂರು – 21
29-4-1990



ಯೋನಿತ್ಯಮಚ್ಯುತಪದಾಂಬುಜಯುಗ್ಮರುಕ್ಮ ವ್ಯಾಮೋಹತಸ್ತದಿತರಾಣಿ ತೃಣಾಯಮೇನೇ !
ಅಸ್ಮದ್ಗುರೋರ್ಭಗವತೋಽಸ್ಯದಯೈಕಸಿಂಧೋಃ ರಾಮಾನುಜಸ್ಯಚರಣೌ ಶರಣಂಪ್ರಪದ್ಯೇ ॥
ವಿಶಿಷ್ಟಾದ್ವೈತದರ್ಶನಸ್ಥಾಪಕಾಚಾರ್ಯಾಃ



ಶ್ರೀಮಾನ್‌ವೇಂಕಟನಾಥಾರ್ಯ: ಕವಿತಾರ್ಕಿಕ ಕೇಸರೀ ।

ವೇದಾಂತಾಚಾರ್ಯವರ್ಯೋಮೇ ಸನ್ನಿಧತ್ತಾಂಸದಾಹೃದಿ ॥

ರಹ್ಯತ್ರಯಸಾರ ಗ್ರಂಥಕರ್ತಾ



ಈ ಗ್ರಂಥವನ್ನು ಅಚ್ಚಿಡಲು ದ್ರವ್ಯಸಹಾಯಮಾಡಿ ಆಶೀರ್ವದಿಸಿದ ಶ್ರೀ ಉಭ ವೇ ಪರಮಹಂಸ ಶ್ರೀಮದಭಿನವ ರಾಮಾನುಜ ಬ್ರಹ್ಮತಂತ್ರಪರಕಾಲ ಮಹಾದೇಶಿಕರು.



ದೇಶಿಕದರ್ಶನ ವಿಜಯಧ್ವಜ ಶ್ರೀ ಉಭ ವೇ. ಸುಂದರ ಸಾಮ್ಯನಾರಾಯಣಾರ್ಯಮಹಾದೇಶಿಕಾಃ

ಶ್ರೀ ಸುಂದರ್ಯಾಭಿಧಸೂರಿವರ್ಯಾದವಾಪ್ತಸಾರಾರ್ಥಮಗಾಧಬೋಧಮ್ !
ಗುಣಾಕರಂ ಸುಂದರಸೌಮ್ಯನಾರಾಯಣಾಭಿಧಾನಂ ಗುರುಮಾಶ್ರಯಾಮ . ||

ಯತ್ಪದಾಂಬೋರುಹಧ್ಯಾನ ವಿಧ್ವಸ್ತಾಽಶೇಷಕಲ್ಮಷಃ !
ವಸ್ತುತಾಮುಪಯಾತೋಽಹಂ ಸೌಮ್ಯನಾರಾಯಣಂಭಜೇ ||

# ವಿಷಯ ಸೂಚನೆ

# ವಿಷಯ ಸೂಚನೆ

# ಶ್ರೀ ಬ್ರಹ್ಮತಂತ್ರ ಸ್ವತಂತ್ರ ಪರಕಾಲ ಮಠ, ಮೈಸೂರು

ಶ್ರೀ ಲಕ್ಷ್ಮೀಹಯವದನ ಲಕ್ಷ್ಮೀನಾರಾಯಣಾಭ್ಯಾಂ ನಮಃ

ಶ್ರೀಮತೇ ರಾಮಾನುಜಾಯ ನಮಃ

ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ

ಶ್ರೀ ಬ್ರಹ್ಮತಂತ್ರ ಸ್ವತಂತ್ರ ಪರಕಾಲ ಗುರುಪರಂಪರಾಯೈನಮಃ

★

ಶ್ರೀಮದ್ವೇದಮಾರ್ಗ ಪ್ರತಿಷ್ಠಾಪನಾಚಾರ್ಯ, ಪರಮಹಂಸ ಪರಿವ್ರಾಜಕಾಚಾರ್ಯ ಸರ್ವತಂತ್ರ ಸ್ವತಂತ್ರೋಭಯವೇದಾಂತಾಚಾರ್ಯ ಶ್ರೀಮತ್ಕವಿಕಥಕ ಕಂಠೀರವ ಚರಣನಳಿನಯುಗಳ ವಿನ್ಯಸ್ತ ಸಮಸ್ತಾತ್ಮಭರ ಶ್ರೀ ಭಗವದ್ರಾಮಾನುಜ ಸಿದ್ಧಾಂತ ನಿರ್ಧಾರಣ ಸಾರ್ವಭೌಮ ಶ್ರೀ ಲಕ್ಷ್ಮೀಹಯಗ್ರೀವ ದಿವ್ಯ ಪಾದುಕಾ ಸೇವಕ **ಶ್ರೀ ಶ್ರೀಮದಭಿನವ ರಾಮಾನುಜ ಬ್ರಹ್ಮ ತಂತ್ರ ಪರಕಾಲ ಸ್ವಾಮಿಭಿರನುಗೃಹೀತಾ.**

## ಪ್ರಸ್ತಾವನಾ

ಶ್ರೀಮದ್ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ರಹಸ್ಯ ಗ್ರಂಥಗಳು ಉನ್ನತವಾದ ಸ್ಥಾನವನ್ನು ಗಳಿಸಿವೆ. ಇವುಗಳು ಉಪದೇಶಪರಂಪರೆಯಲ್ಲಿ ಬಂದ ರಹಸ್ಯತ್ರಯಗಳು ಎಂದು ಹೊಗಳಲ್ಪಡುವ, ಅಷ್ಟಾಕ್ಷರ, ದ್ವಯ ಮತ್ತು ಚರಮಶ್ಲೋಕಗಳಲ್ಲಿ ಅಡಗಿರುವ ಗೂಢಾರ್ಥಗಳನ್ನು ಎತ್ತಿ ತೋರಿಸುತ್ತವೆ. ಶ್ರೀ ಭಾಷ್ಯಾದಿ ಗ್ರಂಥಗಳಲ್ಲಿ ವಿಸ್ತಾರವಾಗಿ ಪೂರ್ವಪಕ್ಷ ಸಿದ್ಧಾಂತ ರೂಪವಾಗಿ ನಿರೂಪಿಸಿರುವ ತತ್ವಹಿತ ಪುರುಷಾರ್ಥಗಳಿಗೂ ಈ ರಹಸ್ಯ ಗ್ರಂಥಗಳಲ್ಲಿ ನಿರೂಪಿಸಿರುವ ಅರ್ಥವಿಶೇಷಗಳಿಗೂ ಯಾವ ವ್ಯತ್ಯಾಸವೂ ಇಲ್ಲ "ಇವ್ವರ್ಥಂಗಳೆಲ್ಲಾಂ ಸತ್ಸಂಪ್ರದಾಯತ್ತೋಡೇ ಶ್ರೀ ಭಾಷ್ಯಂ ಚಿರಕಾಲಂ ಪರಿಚಯಂಪಣ್ಣಿನ ಮಹಾನ್ಗಳುಕ್ಕು ನಿಲವಾಹುಮ್" ಎಂದು ಶ್ರೀಮನ್ನಿಗಮಾಂತ ಮಹಾದೇಶಿಕರು, ರಹಸ್ಯತ್ರಯಸಾರದಲ್ಲಿ ನಿರೂಪಿತವಾದ ಅರ್ಥಗಳು ಬೇರೆಯೋ, ಇವು ಭಾಷ್ಯಸ್ಥವಲ್ಲವೇ ಎಂಬ ಸಂಶಯವನ್ನು ನಿರಾಕರಿಸಿ ಎರಡೂ ಒಂದೇ, ಶ್ರೀ ಭಾಷ್ಯವನ್ನು ಚಿರಕಾಲ ಪರಿಚಯ ಮಾಡಿದ ಮಹಾಪುರುಷರಿಗೇನೆ ಈ ಅರ್ಥಗಳು ಸ್ಫುಟವಾಗಿ ತಿಳಿಯುತ್ತವೆ, ಎಂದು ನಿಗಮಿಸಿರುತ್ತಾರೆ ನಮಗೆ ಸಂಪ್ರದಾಯವು ಭಗವಾನ್, ಮಹಾಲಕ್ಷ್ಮಿ, ವಿಷ್ವಕ್ಸೇನರು, ವ್ಯಾಸರು, ಬೋಧಾಯನರು, ನಮ್ಮಾಳ್ವಾರ್, ನಾಥಮುನಿಗಳು, ಉಯ್ಯಕ್ಕೊಂಡಾರ್, ಮಣಕ್ಕಾಲ್ ನಂಬಿ, ಆಳವಂದಾರ್, ಪೆರಿಯನಂಬಿ, ಶ್ರೀ ಭಾಷ್ಯಕಾರರೆಂದು ಪ್ರಸಿದ್ಧರಾದ ಭಗವದ್ರಾಮಾನುಜರು ಅವರ ಶಿಷ್ಯ ಪ್ರಶಿಷ್ಯರುಗಳು, ಶ್ರೀಮನ್ನಿಗಮಾಂತ ಮಹಾದೇಶಿಕರು, ಅವರ ಶಿಷ್ಯ ಪ್ರಶಿಷ್ಯರುಗಳು, ಹೀಗೆ ಅನುಸ್ಯೂತವಾಗಿ ಬಂದಿದೆ. ಇದೇ ಗುರು ಪರಂಪರೆ ಎನಿಸಿಕೊಳ್ಳುತ್ತದೆ ಸಂಪ್ರದಾಯ ಪರಿಶುದ್ಧಿಯಲ್ಲಿ ಶ್ರೀ ಮನ್ನಿಗಮಾಂತ ಮಹಾದೇಶಿಕರು "ವ್ಯಾಸಬೋಧಾಯನಾದಿಹಳಾಲೇ ಯಥಾಧಿಕಾರಮ್ ಪ್ರವರ್ತಿತಮಾನ ವೇದಾಂತ ಸಂಪ್ರದಾಯತ್ತಿರ್ಕು, ಇಂದ ಕಲಿಯುಗತ್ತಿಲೇ, ಬ್ರಹ್ಮನಂದ್ಯಾದಿಹಳುಕ್ಕು ಪ್ಪಿನ್ಬು ನಮ್ಮಾಳ್ವಾರ್ ಪ್ರವರ್ತಕರಾನಾರ್" ಎಂದು ಅನುಗ್ರಹಿಸಿರುವ ಪ್ರಕಾರ, ವ್ಯಾಸಬೋಧಾಯನಾದಿಗಳು ಬ್ರಹ್ಮಸೂತ್ರ, ವೃತ್ತಿಗ್ರಂಥಗಳನ್ನು ಅನುಗ್ರಹಿಸಿದರು ಬ್ರಹ್ಮನಂದಿಗಳು ವಾಕ್ಯ ಗ್ರಂಥವನ್ನು ಅನುಗ್ರಹಿಸಿದರು. ಇವು ಗಳು, ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಮೂಲಗ್ರಂಥಗಳೆಂದು ನಿರ್ವಿವಾದವಾಗಿ ಹೇಳಬಹುದು. ಈ ಗ್ರಂಥಗಳ ಸಾರವನ್ನು ನಮ್ಮಾಳ್ವಾರವರು ವಿಷ್ವಕ್ಸೇನರಿಂದ

ಉಪದೇಶ ಹೊಂದಿದರು. ಇವರು ಶ್ರೀಮನ್ನಾಥ ಮುನಿಗಳಿಗೆ ಯೋಗದಶೆಯಲ್ಲಿ ಸಾಕ್ಷಾತ್ಕರಿಸಿ, ವೇದಾಂತೋಪದೇಶವನ್ನೂ, ತಿರುವಾಯ್‌ಮೊಳಿ ಮೊದಲಾದ ದಿವ್ಯ ಪ್ರಬಂಧಗಳನ್ನೂ ಉಪದೇಶಿಸಿದರು ಹೀಗೆ ಸತ್ಸಂಪ್ರದಾಯಾಗತವಾದ ಸಮೀಚೀನ ಶಾಸ್ತ್ರಾರ್ಥಗಳೇ ಗುರುಪರಂಪರಾ ಮೂಲಕ ನಮಗೆ ಉಪಲಬ್ಧಗಳಾಗಿವೆ.

ಎಲ್ಲಾ ಉಪನಿಷತ್ತುಗಳೂ ಭಗವಂತನ ಸ್ವರೂಪ ಸ್ವಭಾವಗಳನ್ನೂ (ತತ್ವ) ಭಕ್ತಿಪ್ರಪತ್ತಿರೂಪ ಉಪಾಯ ಸ್ವರೂಪಗಳನ್ನೂ (ಹಿತ), ಪ್ರಕೃತಿಮಂಡಲಕ್ಕೆ ಮೇಲಾದ ಪರಮಪದದಲ್ಲಿ ಭಗವಂತನ ಸಾಯುಜ್ಯವನ್ನು ಪಡೆದು ಅವನ ಗುಣಾನುಭವ ಪರಿವಾಹವಾದ ಕೈಂಕರ್ಯಗಳನ್ನು ಮಾಡುವುದೆಂಬ ಪರಮಪುರುಷಾರ್ಥವನ್ನೂ ಉಪದೇಶಿಸುತ್ತವೆ. ಈ ಉಪನಿಷತ್ತುಗಳನ್ನು ವಿಷಯ ವಾಕ್ಯಗಳನ್ನಾಗಿಟ್ಟುಕೊಂಡು ವೇದವ್ಯಾಸರು ಬ್ರಹ್ಮ ಸೂತ್ರಗಳನ್ನು ರಚಿಸಿದರು ಈ ಉಪನಿಷತ್ತುಗಳ ಅರ್ಥಗಳನ್ನು ಉಪಬ್ರಂಹಣಗಳೆಂದು ಕರೆಯಲ್ಪಡುವ ಇತಿಹಾಸಪುರಾಣಗಳಿಂದ ತಿಳಿಯಬೇಕು.

"ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪ ಬೃಹ್ಮಯೇತ್ ।

ಬಿಭೇತ್ಯಲ್ಪಶುತಾದ್ವೇದೋ ಮಾಮಯಂ ಪ್ರತರಿಷ್ಯತಿ ॥"

ಎಂದು ವೇದಗಳು ಅಲ್ಪಜ್ಞಾನಿಗಳು ಅಪಾರ್ಥಗಳನ್ನು ಮಾಡುತ್ತಾರೆಂದು ಹೆದರುತ್ತವೆ ಆದ್ದರಿಂದ ಮಹರ್ಷಿ ಪ್ರಣೀತಗಳಾದ ಇತಿಹಾಸ ಪುರಾಣಗಳಿಂದ ವೇದಾರ್ಥಗಳ ವಿಶದೀಕರಣವನ್ನು ಮಾಡಬೇಕು.

ಈ ಉಪಬ್ರಂಹಣಗಳಲ್ಲಿ ಆಳ್ವಾರುಗಳ ದಿವ್ಯಪ್ರಬಂಧಗಳು ಅತ್ಯುನ್ನತ ಸ್ಥಾನವನ್ನು ಪಡೆದಿವೆ. "ಯತ್ತತ್ ಕೃತ್ಯಂ ಮುನೀನಾಂ ಶ್ರುತಿಗಣ ವಿಹಿತೈಃ ಸೇತಿಹಾಸೈಃ ಪುರಾಣೈಃತತ್ರಾ ಸೌಸತ್ವಸೀಮ್ನಃ ಶಠ ಮಥನಮುನೇಃ ಸಂಹಿತಾ ಸಾರ್ವಭೌಮೀ" ಎಂದು ದ್ರಮಿಡೋಪನಿಷತ್ತಾತ್ಪರ್ಯರತ್ನಾವಳಿಯಲ್ಲಿ ಶ್ರೀಮನ್ನಿಗಮಾಂತ ಮಹಾದೇಶಿಕರು, ಶಠಮಥನ ಮುನಿಗಳ – ಅಂದರೆ ನಮ್ಮಾಳ್ವಾರವರ – ದ್ರಮಿಡವೇದ, ದ್ರಾಮಿಡಸಂಹಿತೆ, ಇತ್ಯಾದಿಯಾಗಿ ವ್ಯವಹರಿಸಲ್ಪಡುವ ಪ್ರಬಂಧಗಳನ್ನು ಉಪಬ್ರಂಹಣಗಳಲ್ಲಿ ಶ್ರೇಷ್ಠತಮವೆಂದು ಅನುಗ್ರಹಿಸಿರುತ್ತಾರೆ ಶ್ರೀಮನ್ನಾಥ ಮುನಿಪ್ರಭೃತಿಗಳೂ ಈ ದಿವ್ಯಪ್ರಬಂಧಗಳನ್ನು ಬಹಳವಾಗಿ ಆದರಿಸಿರುತ್ತಾರೆ ಆದ್ದರಿಂದಲೇ ವಿಶಿಷ್ಟಾದ್ವೈತ ಸಿದ್ಧಾಂತವು ಉಭಯ ವೇದ ಪರಿಕರ್ಮಿತವಾದ, ಅಪ್ರಕಂಪ್ಯ ಸಿದ್ಧಾಂತ. ವೇದ ಶಾಸ್ತ್ರ ಮೂಲವಾದ ಸಂಪ್ರದಾಯಾಗತವಾದ ಸಿದ್ಧಾಂತವೂ ಇದೇ.

ಪ್ರಕೃತ **ಶ್ರೀಮನ್ನಿಗಮಾಂತ ಮಹಾದೇಶಿಕ ಪ್ರಣೀತವಾದ ಶ್ರೀಮದ್ರಹಸ್ಯತ್ರಯಸಾರ** ಗ್ರಂಥವು ಶ್ರೀ ಭಾಷ್ಯಾದಿ ಸಕಲವೇದಾಂತ ಗ್ರಂಥಗಳ ಸಾರವು ರಹಸ್ಯ ಮಂತ್ರಗಳಲ್ಲಿ ಅಷ್ಟಾಕ್ಷರವು ಪ್ರಧಾನ "ಸರ್ವಮಷ್ಟಾಕ್ಷರಾಂತಸ್ಥಂ" ಎಂದು ಅಷ್ಟಾಕ್ಷರವು ಸಕಲ ವೇದಾಂತಾರ್ಥ ಗರ್ಭಿತವು ಇದರ ವ್ಯಾಖ್ಯಾನವೇ ಇತರ ರಹಸ್ಯ ಮಂತ್ರಗಳು. ಶ್ರೀಮದಹಸ್ಯತ್ರಯಸಾರ ಗ್ರಂಥವು 32 ಅಧಿಕಾರಗಳಿಂದ ಕೂಡಿ, ಅರ್ಥಾನುಶಾಸನ ಭಾಗ, ಸ್ಥಿರೀಕರಣ ಭಾಗ, ಪದವಾಕ್ಯಯೋಜನಾ ಭಾಗ ಮತ್ತು ಸಂಪ್ರದಾಯ ಪ್ರಕ್ರಿಯಾಭಾಗವೆಂದು ನಾಲ್ಕು ಭಾಗಗಳಾಗಿ ವಿಂಗಡಿಸಲ್ಪಟ್ಟಿದೆ. ಮೊದಲನೆಯದಾದ ಅರ್ಥಾನುಶಾಸನ ಭಾಗದಲ್ಲಿ ಚೇತನ, ಅಚೇತನ, ಈಶ್ವರನೆಂಬ ತತ್ವತ್ರಯಗಳ ಸ್ವರೂಪ, ಚೇತನಾಚೇತನಗಳು ಈಶ್ವರನಿಗೆ ಶರೀರ, ಅವುಗಳಿಗೂ ಈಶ್ವರನಿಗೂ ಇರುವ ಶರೀರಾತ್ಮಭಾವ ಸಂಬಂಧ, ಭಕ್ತಿ, ಪ್ರಪತ್ತಿಗಳ ಸ್ವರೂಪ, ಪುರುಷಾರ್ಥಸ್ವರೂಪ, ಎಂಬೀ ವಿಷಯಗಳನ್ನು ಕೂಲಂಕಷವಾಗಿ ವಿಚಾರಿಸಿ ಸಂಪ್ರದಾಯಾರ್ಥಗಳನ್ನು ಪ್ರಮಾಣೋಪಪತ್ತಿಗಳ ಮೂಲಕ ಆಚಾರ್ಯರು ನಿರೂಪಿಸಿರುತ್ತಾರೆ ಸ್ಥಿರೀಕರಣ ಭಾಗದಲ್ಲಿ ಸಿದ್ಧೋಪಾಯ, ಸಾಧ್ಯೋಪಾಯಗಳ ಶೋಧನೆ, ಮತ್ತು ಉಪಾಯ ಪ್ರಭಾವಗಳನ್ನು ಆಕ್ಷೇಪ ಸಮಾಧಾನ ಪೂರ್ವಕ ನಿರೂಪಣೆಮಾಡಿರುತ್ತಾರೆ.

ಪದವಾಕ್ಯ ಯೋಜನಾಭಾಗದಲ್ಲಿ ರಹಸ್ಯ ಮಂತ್ರಗಳಾದ ಅಷ್ಟಾಕ್ಷರ, ದ್ವಯ ಮತ್ತು ಚರಮಶ್ಲೋಕಗಳ ಪದಗಳಲ್ಲಿಯೂ ಅಧ್ಯಾಹೃತ ಕ್ರಿಯಾ ಪದಗಳಿಂದ ಉಂಟಾದ ವಾಕ್ಯಗಳಲ್ಲಿಯೂ ಮೇಲೆ ಹೇಳಿದ ಅರ್ಥಗಳು

ಹೇಗೆ ನಿರೂಪಿತವಾಗಿವೆ ಎಂಬುದನ್ನು ವಿಚಾರಿಸಿ, ಪರಮ ರಹಸ್ಯವಾದ ಲಕ್ಷ್ಮೀವಿಶಿಷ್ಟ ನಾರಾಯಣನೆಂಬ ಪರ ತತ್ವದ ಉಪಾಯೋಪೇಯಾತ್ಮಕವಾದ ಸ್ವರೂಪವನ್ನೂ, ಶರಣಾಗತಿ ಸ್ವರೂಪವನ್ನೂ, ಗೀತಾಚರಮ ಶ್ಲೋಕದ ಅರ್ಥವನ್ನೂ ವಿಸ್ತಾರವಾಗಿ ನಿರೂಪಿಸಿರುತ್ತಾರೆ ಇವುಗಳಲ್ಲಿ **ಸರ್ವಧರ್ಮಾನ್ ಪರಿತ್ಯಜ್ಯ** ಎಂದಾರಂಭಿಸುವ ಗೀತಾ ಚರಮಶ್ಲೋಕದ ಅಂತ್ಯದಲ್ಲಿರುವ **ಮಾಶುಚಃ** – ಎಂಬ ಶಬ್ದಗಳಿಗೆ ಅರ್ಥವನ್ನು ಪೂರ್ವಾಚಾರ್ಯರು ತಮ್ಮ ಅಂತಿಮ ದಶೆಯಲ್ಲಿ ಸಚ್ಛಿಷ್ಯರಿಗೆ ಉಪದೇಶಿಸುತ್ತಿದ್ದರೆಂದು ಹೇಳಿ, ಆ ಪರಮರಹಸ್ಯಾರ್ಥಗಳು ಎಲ್ಲಿ ನಷ್ಟವಾಗಿ ಹೋಗುತ್ತವೆಯೋ ಎಂದು ಹೆದರಿ ಪರಮಕೃಪೆಯಿಂದ ಅವುಗಳನ್ನು ನಮಗಾಗಿ ಆಚಾರ್ಯವರ್ಯರು ಗ್ರಂಥಸ್ಥವಾಗಿ ಉಪದೇಶಿಸಿರುತ್ತಾರೆ ಇದು ಪರಮೋಪಾದೇಯ ನಾಲ್ಕನೆಯದಾದ ಸಂಪ್ರದಾಯ ಪ್ರಕ್ರಿಯಾ ಭಾಗದಲ್ಲಿ ಆಚಾರ್ಯ ಮತ್ತು ಶಿಷ್ಯರ ಕೃತ್ಯಗಳನ್ನು ನಿರೂಪಿಸಿ, ಪರಮರಹಸ್ಯಗಳಾದ ಈ ಅರ್ಥಗಳನ್ನು ಸಚ್ಛಿಷ್ಯರಿಗೆ ಉಪದೇಶಿಸುವುದಲ್ಲದೆ, ಅಯೋಗ್ಯರಿಗೆ ಉಪದೇಶಿಸ ಕೂಡದೆಂದು ನಿಗಮಿಸಿರುತ್ತಾರೆ. ಹೀಗೆ ಈ ರಹಸ್ಯ ಗ್ರಂಥವು ಅತ್ಯಂತ ಉಪಾದೇಯ ಮತ್ತು ಶ್ರೇಷ್ಠತಮವಾದದ್ದು

## ಪ್ರಸ್ಥಾನತ್ರಯ

ವೇದಗಳು (ಉಪನಿಷತ್ತುಗಳು), ಬ್ರಹ್ಮಸೂತ್ರ, ಭಗವದ್ಗೀತೆ ಮೊದಲಾದವುಗಳನ್ನು ಪ್ರಮಾಣವಾಗಿ ಅಂಗೀಕರಿಸಿ ಪ್ರಸ್ಥಾನತ್ರಯಗಳೆಂದು ಅದ್ವೈತ, ವಿಶಿಷ್ಟಾದ್ವೈತ ಮತ್ತು ದ್ವೈತಮತಗಳು ಹೊರಟಿವೆ.

## ಅದ್ವೈತ ಮತ

ಅದ್ವೈತ ಮತವು "ಬ್ರಹ್ಮಸತ್ಯಂ ಜಗನ್ಮಿಥ್ಯಾ" ಎಂದು ಬ್ರಹ್ಮವೊಂದೇ ಸತ್ಯ, ಚೇತನಾಚೇತನಾತ್ಮಕವಾದ ಈ ಪ್ರಪಂಚವು ಅಪಾರಮಾರ್ಥಿಕ, ಎಂದು ಹೇಳಿ "ಸದೇವಸೋಮ್ಯೇದಮಗ್ರ ಆಸೀತ್ ಏಕಮೇವಾದ್ವಿತೀಯಂ ಬ್ರಹ್ಮ" ಇತ್ಯಾದಿ ಶ್ರುತಿಗಳಿಗೆ ಮುಖ್ಯ ಪ್ರಾಮಾಣ್ಯವನ್ನು ಕೊಟ್ಟು, ಜ್ಞಾ ಜ್ಞೌ ದ್ವಾವಜಾವೀಶನೀಶೌ, ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ ಏಕೋಬಹೂನಾಂ ಯೋವಿದಧಾತಿಕಾಮಾನ್, ಇತ್ಯಾದಿ ಭೇದ ಶ್ರುತಿಗಳನ್ನು ವ್ಯಾವಹಾರಿಕಗಳನ್ನಾಗಿ ಆಶ್ರಯಿಸಿ, ಬ್ರಹ್ಮವು ಸಜಾತೀಯ, ವಿಜಾತೀಯ, ಸ್ವಗತ ನಾನಾಭೇದ ರಹಿತವು ಎಂದು ಹೇಳಿ, ನಿರ್ವಿಶೇಷ ಬ್ರಹ್ಮವೇ ತತ್ವವೆಂದು ನಿರೂಪಿಸಿದೆ. "ಅಹಂಬ್ರಹ್ಮಾಸ್ಮಿ, ತತ್ವಮಸಿ, ಅಯಮಾತ್ಮಾ ಬ್ರಹ್ಮ, ಸರ್ವಂಖಲ್ವಿದಂ ಬ್ರಹ್ಮ, ಇತ್ಯಾದಿ ಅಭೇದಬೋಧಕ ವಾಕ್ಯಾರ್ಥಗಳ, ಶ್ರವಣ ಮನನ, ನಿದಿಧ್ಯಾಸನಾ ನಂತರ, "ಅಹಂ ಬ್ರಹ್ಮಾಸ್ಮಿ "ಎಂಬ ವಾಕ್ಯಜನ್ಯ ಜ್ಞಾನವೇ ಮುಕ್ತಿಸಾಧನವೆಂದು ಹೇಳಿ ಜೀವ ಬ್ರಹ್ಮೈಕ್ಯವೇ ಮೋಕ್ಷವೆಂದು ಸಿದ್ಧಾಂತೀಕರಿಸಿದೆ. ಹೀಗೆ ಅಭೇದ ಶ್ರುತಿಗಳೇ ಮುಖ್ಯ. ಭೇದ ಶ್ರುತಿಗಳು ಔಪಚಾರಿಕ, ಅಂದರೆ ವ್ಯವಹಾರ ದಶೆಯಲ್ಲಿ ಸತ್ಯ, ಪರಮಾರ್ಥದಶೆಯಲ್ಲಿ "ಅವಿಭಾಗೇನ ದೃಷ್ಟತ್ವಾತ್" ಎಂಬ ಸೂತ್ರದಲ್ಲಿ ಹೇಳಿರುವಂತೆ ಅಭೇದವೇ ಸತ್ಯವೆಂಬುದು ಈ ಮತದ ಸಾರ

## ದ್ವೈತಮತ

ಅದ್ವೈತ ಮತಕ್ಕೆ ಪ್ರತಿಯಾಗಿ, ಐಕ್ಯವು ಪರಮಾರ್ಥವಲ್ಲ. ಚೇತನ, ಅಚೇತನ, ಈಶ್ವರರೆಂಬ ತತ್ವತ್ರಯಗಳು ಸತ್ಯ. ಜೀವ ಬ್ರಹ್ಮರಿಗೆ ಅತ್ಯಂತ ಭೇದವೇ ಸತ್ಯ. "ತತ್ವಮಸಿ" ಮೊದಲಾದ ಮಹಾವಾಕ್ಯಗಳಲ್ಲಿ ಜೀವನು ಬ್ರಹ್ಮಾಧೀನನಾದ್ದರಿಂದ ಅಭೇದವು ಅಮುಖ್ಯವಾದ ವ್ಯವಹಾರ. ಸತ್ಯಗುಣ ಪರಿಪೂರ್ಣನಾದ ಬ್ರಹ್ಮನಲ್ಲಿ ಭಕ್ತಿಯಿಂದಲೇ

ಮುಕ್ತಿ ಬ್ರಹ್ಮೈಕ್ಯ, ತದ್ಗತಗುಣಗಳಿಗೂ ಅಭೇದವನ್ನು ಒಪ್ಪಿ "ನೇಹನಾನಾಸ್ತಿ ಕಿಂಚನ" ಇತ್ಯಾದಿ ಭೇದ ನಿಷೇಧ ಶ್ರುತಿಗಳಿಗೆ ಅರ್ಥವನ್ನು ನಿರ್ವಹಿಸಿ, ನಂತರ ಬ್ರಹ್ಮ ತದ್ಗುಣಗಳಿಗೆ ಭೇದ ವ್ಯವಹಾರವನ್ನು ನಿರ್ವಾಹ ಮಾಡಲು, 'ವಿಶೇಷ' ಎಂಬ ಪದಾರ್ಥವನ್ನು ಸ್ವೀಕರಿಸಿರುವುದು ದ್ವೈತ ಮತದ ವೈಶಿಷ್ಟ್ಯ.

## ವಿಶಿಷ್ಟಾದ್ವೈತ (ಸವಿಶೇಷಾದ್ವೈತ)

ಭಗವದ್ರಾಮಾನುಜರು 'ವೇದಾಃ ಪ್ರಮಾಣಂ' ಎಂದು ಸರ್ವ ಶ್ರುತಿಗಳಿಗೂ ಏಕರೂಪವಾದ ಅಂದರೆ ಒಂದು ಮುಖ್ಯ ಮತ್ತೊಂದು ಗೌಣವೆಂದಲ್ಲದೆ ಮುಖ್ಯವಾದ ಪ್ರಾಮಾಣ್ಯವನ್ನು ಒಪ್ಪಿ ಭೇದಾ ಭೇದ ಶ್ರುತಿಗಳಿಗೆ ಐಕಕಂರ್ಯವನ್ನು ಘಟಕ ಶ್ರುತಿಗಳಿಂದು ವ್ಯವಹರಿಸಲ್ಪಡುವ ಶರೀರಾತ್ಮಭಾವ ಸಂಬಂಧ ಬೋಧಕ ಶ್ರುತಿಗಳ ಮೂಲಕ ನಿರೂಪಿಸಿರುತ್ತಾರೆ. "ವೇದಾಃ ಪ್ರಮಾಣಂ" ಎಂಬಲ್ಲಿ ಪ್ರಮಾಣಾನಿ ಎಂಬ ಬಹುವಚನವನ್ನು ಹೇಳದೆ ಏಕವಚನವನ್ನು ಹೇಳಿರುವುದರಿಂದ ಸಕಲ ವಿಧಗಳಾದ ಶ್ರುತಿಗಳಿಗೂ ಏಕವಿಧವಾದ ಪ್ರಾಮಾಣ್ಯವನ್ನು ಸ್ವೀಕರಿಸಿರುವುದೇ ಕಾರಣ

ಚೇತನ, ಅಚೇತನ, ಈಶ್ವರನೆಂಬ ಮೂರು ತತ್ವಗಳೂ ಸತ್ಯ ಚೇತನಾಚೇತನಗಳು ಈಶ್ವರನಿಗೆ ಶರೀರ. ಅಂದರೆ ಅಪೃಥಕ್ ಸಿದ್ಧ ವಿಶೇಷಣಗಳು ಈಶ್ವರನು ಆತ್ಮಾ-ಶರೀರೀ. "ಅಂತಃ ಪ್ರವಿಷ್ಟಶ್ಶಾಸ್ತಾ ಜನಾನಾಂ ಸರ್ವಾತ್ಮಾ", ಎಂಬ ಶ್ರುತಿಯು ಈಶ್ವರನು ಸರ್ವಜನರಲ್ಲಿಯೂ ಅಂತಃ ಪ್ರವೇಶಿಸಿ ನಿಯಮಿಸುತ್ತಾನೆಂದು ತಿಳಿಸಿರುತ್ತೆ. ಇಲ್ಲಿ "ಸರ್ವಾತ್ಮಾ", ಎಂದು ಹೇಳಿರುವುದು ಗಮನಿಸತಕ್ಕದ್ದು. ಈಶ್ವರನು ಆತ್ಮನಾದರೆ ಇದಕ್ಕೆ ಪ್ರತಿ ಸಂಬಂಧಿಯು ಶರೀರವೇ ಆಗಿರಬೇಕಲ್ಲವೇ. ಪತಿ ಪತ್ನೀ ಭಾವ, ಸ್ವಸ್ವಾಮಿ ಭಾವ ಸಂಬಂಧಗಳಂತೆ ಈ ಶರೀರಾತ್ಮಭಾವ ಸಂಬಂಧವೂ ವಿಶೇಷವಾದದ್ದು. ಲೋಕದಲ್ಲಿ "ಅಸ್ಯ ಇಯಂಭಾರ್ಯಾ" ಎಂದು ಒಬ್ಬಳನ್ನು ಹೇಳಿದರೂ, ಇದಕ್ಕೆ ಪ್ರತಿಸಂಬಂಧಿಯಾದ "ಇದಂ" ಪದಾರ್ಥವು ಪುರುಷ-ಪತಿಯೇ ಆಗಬೇಕಲ್ಲವೇ. ಹಾಗೆ "ಸರ್ವಸ್ಯ ಆತ್ಮಾ" ಎಂದು ಈಶ್ವರನನ್ನು ಚೇತನಾಚೇತನರೂಪವಾದ ಜಗತ್ತಿಗೆ ಆತ್ಮನನ್ನಾಗಿ ಹೇಳಿರುವುದರಿಂದ, ಪ್ರತಿಸಂಬಂಧಿಗಳಾದ ಚೇತನಾ ಚೇತನಗಳು ಇವನಿಗೆ ಶರೀರವೆಂಬುದು ಸ್ವತಃ ಸಿದ್ಧ. ಇದರಿಂದ ಚೇತನಾಚೇತನಗಳಿಗೂ ಈಶ್ವರನಿಗೂ ಶರೀರಾತ್ಮಭಾವ ಸಂಬಂಧವು ಸಿದ್ಧವಾಯಿತು. ಬೃಹದಾರಣ್ಯಕದಲ್ಲಿ ಸ್ಪಷ್ಟವಾಗಿ, ಯಸ್ಯ ಪೃಥಿವೀ ಶರೀರಂ, ಯಸ್ಯಾತ್ಮಾ ಶರೀರಂ ಇತ್ಯಾದಿ ರೀತ್ಯಾ ಶಾಖಾಭೇದದಿಂದ 22 ಸಲ ಈ ಶರೀರಾತ್ಮಭಾವ ಸಂಬಂಧವು ಹೇಳಲ್ಪಟ್ಟಿದೆ. ನಮ್ಮ ಶರೀರದಂತೆ ಚೇತನಾ ಚೇತನಗಳು ಈಶ್ವರನಿಗೆ ಪ್ರಾಣಾಧೀನ ಧಾರಣವಾಗಿ ಭೋಗಾಯತನ ರೂಪವಾದದ್ದು ಎಂದು ಭಾವಿಸಕೂಡದು. ಇದು ಲೌಕಿಕ ಶರೀರ ಲಕ್ಷಣ. ಶ್ರುತ್ಯುಕ್ತಲಕ್ಷಣವು ಲೌಕಿಕ ವೈದಿಕ ಪ್ರಯೋಗಗಳಿಗೆಲ್ಲಾ ಸಾಧಾರಣವಾದದ್ದು ಅಂದರೆ ಲೋಕದಲ್ಲಿ ಕಂಡು ಬರುವ ಪ್ರತಿಜೀವ ಶರೀರಗಳಿಗೂ, ಜಗತ್ತಿಗೂ ಈಶ್ವರನಿಗೂ ಇರುವ ಶರೀರಾತ್ಮ ಭಾವಗಳಿಗೂ ಈ ಲಕ್ಷಣವು ಅಂದರೆ"ಯಸ್ಯಚೇತನಸ್ಯ ಯದ್ರವ್ಯಂ ಸ್ವಾರ್ಥೇ ನಿಯಂತುಂ ಧಾರಯಿತುಂಚ ಶಕ್ಯಂತಚ್ಛೇಷತೈಕ ಸ್ವಭಾವಂ ತತ್ತಸ್ಯ ಶರೀರಂ ಅನ್ಯತ್ ಶರೀರೀ", ಎಂಬುದು ಸಾಮಾನ್ಯವೆಂದು ಶ್ರೀ ಭಾಷ್ಯಕಾರರು ಶ್ರುತ್ಯನುಸಾರವಾಗಿ ವ್ಯವಸ್ಥೆಗೊಳಿಸಿದ್ದಾರೆ "ಯಸ್ಯ ಚೇತನಸ್ಯಯತ್ ಅಪೃಥಕ್ ಸಿದ್ಧಂ ದ್ರವ್ಯಂ ತತ್ತಸ್ಯ ಶರೀರಂ" ಎಂದು ಶ್ರೀ ಮನ್ನಿಗಮಾಂತ ಮಹಾದೇಶಿಕರು ಈ ಶರೀರಾತ್ಮ ಭಾವಲಕ್ಷಣವನ್ನು ಸಂಗ್ರಹವಾಗಿ ನಿರೂಪಿಸಿದ್ದಾರೆ. ಇದರಿಂದಾಗಿ ಚೇತನಾ ಚೇತನಗಳು ಪರಬ್ರಹ್ಮಕ್ಕೆ ನಿಯತ ವಿಶೇಷಣಗಳು ಎಂದು ಸಿದ್ಧವಾಯಿತು ಇದರಿಂದಲೇ ಸೂತ್ರಕಾರರೂ "ಅಂಶೋನಾನಾ ವ್ಯಪದೇಶಾತ್ ಅನ್ಯಥಾಚ ದಾಶಕಿತವಾದಿತ್ವಮಧೀಯತ ಏಕೇ"(ಬ್ರಹ್ಮಸೂತ್ರ 2–3–7) ಎಂಬ ಅಂಶಾಧಿಕರಣದಲ್ಲಿ ಜೀವನು ಬ್ರಹ್ಮನ ಅಂಶ-ವಿಶಿಷ್ಟಸ್ಯ ಏಕವಸ್ತುನಃ ವಿಶೇಷಣಂ ಅಂಶ ಏವ (ಭಾಷ್ಯ), ಎಂದು ನಿರೂಪಿಸಿರುತ್ತಾರೆ "ನಾತ್ಮಾಶ್ರುತೇಃ", ಎಂಬ ಹಿಂದಿನ ಸೂತ್ರದಿಂದ ಅತ್ಮ ಶಬ್ದವು ಅನುವರ್ತಿಸಲ್ಪಟ್ಟು ಪರಸ್ಯ ಬ್ರಹ್ಮಣಃ ಆತ್ಮಾ ಜೀವಃ ಅಂಶಃ, ನಾನಾವ್ಯಪದೇಶಾತ್-ಭೇದವ್ಯಪದೇಶಾತ್, ಅನ್ಯಥಾಚ-ಅಭೇದವ್ಯಪದೇಶಾಚ್ಚ

ದು ಸೂತ್ರಾರ್ಥ. ಅಂಶವೆಂದರೆ ಏಕವಸ್ತ್ವೇಕದೇಶಿತ್ವವೆಂಬ ಅರ್ಥದಲ್ಲಿ ಜೀವನೂ ಬ್ರಹ್ಮನೂ ಒಂದೇ
ಂದ ಜೀವಗತ ದುಃಖಾದಿಗಳು ಬ್ರಹ್ಮಕ್ಕೂ ಉಂಟಾಗುತ್ತದೆಯೋ ಎಂಬ ಭ್ರಮವನ್ನು ನಿರಾಕರಿಸಿ, "ಪ್ರಕಾ
ವತ್ತು ನೈವಂಪರಃ" (ಬ್ರಹ್ಮಸೂತ್ರ 2-3-45) ಎಂದು ಅಗ್ನಿ ಸೂರ್ಯ ಮೊದಲಾದ ತೇಜೋದ್ರವ್ಯಗಳ ಪ್ರಕಾ
ಆ ದ್ರವ್ಯಗಳಿಗೆ ವಿಶೇಷಣವಾಗಿರುವಂತೆ, ಜೀವ ಬ್ರಹ್ಮರಿಗೆ ವಿಶೇಷಣ ವಿಶೇಷ್ಯ ಭಾವವನ್ನು ನಿರೂಪಿಸಿ, ಎರಡು
ಗಳೂ ಬೇರೆ ಬೇರೆ, ವಿಶೇಷಣ ವಿಶಿಷ್ಟವಾದದ್ದರಿಂದ ಒಂದು ಎಂಬ ವ್ಯವಹಾರವೆಂದು ನಿರೂಪಿಸಿ ಜೀವಗತ
ದಿಗಳು ಬ್ರಹ್ಮಕ್ಕೆ ಉಂಟಾಗುವುದಿಲ್ಲ, ವಿಶೇಷಣ ವಿಶೇಷ್ಯಗಳಿಗೆ ಸ್ವಭಾವ ವೈಲಕ್ಷಣ್ಯವು ಸಿದ್ಧವೆಂದು ನಿರೂಪಿ
ತ್ತಾರೆ. ಹಾಗೆಯೇ ಅಹಿಕುಂಡಲಾಧಿಕರಣದಲ್ಲಿ (3-2-6) ಅಚೇತನಕ್ಕೂ ಬ್ರಹ್ಮಕ್ಕೂ ಅಂಶಾಂಶಿಭಾವವು ಹೇಳ
ದೆ. ಈ ರೀತಿಯಲ್ಲಿ ಚೇತನಾಚೇತನಗಳಿಗೂ ಈಶ್ವರನಿಗೂ ಪರಸ್ಪರ ಭೇದವೂ ಸತ್ಯ ಶರೀರಾತ್ಮಭಾವ
ಅಭೇದವೂ ಸತ್ಯ ಇದರಿಂದಾಗಿ ಭೇದಾಭೇದ ಶ್ರುತಿಗಳೆರಡೂ ಘಟಕ ಶ್ರುತಿಗಳ ಬಲದಿಂದ ಸುರಕ್ಷಿತಗಳು

ಶ್ರೀಮನ್ನ್ಯಾಯ ಸಿದ್ಧಾಂಜನದಲ್ಲಿ ಆರಂಭದಲ್ಲಿಯೇ, "ಅಶೇಷ ಚಿದಚಿತ್ಪ್ರಕಾರಂ ಬ್ರಹ್ಮ ಏಕಮೇವತತ್ತ್ವಂ –
ಪ್ರಕಾರ ಪ್ರಕಾರಿಣೋಃ ಪ್ರಕಾರಾಣಾಂಚ ಮಿಥಃ ಅತ್ಯಂತ ಭೇದೇಽಪಿ, ವಿಶಿಷ್ಟೈಕ್ಯಾದಿ ವಿವಕ್ಷಯಾ ಏಕತ್ವ
ಶೇಶಃ, ತದಿತರನಿಷೇಧಶ್ಚ, ಅನ್ಯಥಾ ಸಮಸ್ತ ಪ್ರಮಾಣ ಸಂಕ್ಷೋಭ ಪ್ರಸಂಗಾತ್", ಎಂದು ನಿಗಮಾಂತ
ದೇಶಿಕರು ಬ್ರಹ್ಮಸೂತ್ರ – ಭಾಷ್ಯಗಳ ಆಧಾರದ ಮೇಲೆ ಪ್ರಮೇಯವನ್ನು ನಿಷ್ಕರ್ಷಿಸಿರುತ್ತಾರೆ

ಈ ಅರ್ಥಗಳನ್ನೇ ಶ್ರೀಮದ್ರಹಸ್ಯತ್ರಯಸಾರದ ಪ್ರಧಾನ ಪ್ರತಿತಂತ್ರ, ತತ್ತ್ವತ್ರಯಾಧಿಕಾರಗಳಲ್ಲಿ ಆಚಾರ್ಯರು
ಣ ಪುರಸ್ಸರವಾಗಿ ನಿರೂಪಿಸಿರುತ್ತಾರೆ ನಮ್ಮಾಳ್ವಾರ್ರವರ ತಿರುವಾಯ್ಮೊಳಿ "ಉಯರ್ವರ ಉಯರ್
ಮುಡೈಯವನ್" (1-1-1), – ಅನಂತ ಗುಣ ವಿಶಿಷ್ಟನು, ಉಳನೆನಿಲ್ ಉಳನ್–ಸೂಕ್ಷ್ಮ
ಾಚೇತನ ವಿಶಿಷ್ಟನು ಮತ್ತು ಸ್ಥೂಲ ಚೇತನಾಚೇತನ ವಿಶಿಷ್ಟನು – ಚೇತನಾಚೇತನ ಪ್ರಕಾರಕ ಬ್ರಹ್ಮ
ಲ್ ಮಿಶೈಯುಯಿರೆನಕ್ಕರಂದೆಂಗುಂ ಪರಂದುಳನ್" – ಶರೀರದಲ್ಲಿ ಆತ್ಮಾ ಇರುವಂತೆ, ಸರ್ವವ್ಯಾಪಿ – ಅಂದರೆ
ಾಚೇತನಗಳಿಗೂ ಈಶ್ವರನಿಗೂ ಶರೀರಾತ್ಮಭಾವ ಸಂಬಂಧವಿದೆ, ಇತ್ಯಾದಿಯಾಗಿ ನಿರೂಪಿಸಿರುತ್ತಾರೆ. ಈ
ುಗಳೇ ಮೇಲೆ ಹೇಳಿದ ನಿರ್ವಾಹಗಳಿಗೂ ಮೂಲವಾದ ಉಪದೇಶಗಳು.

ಇದರಿಂದಾಗಿ ವಿಶಿಷ್ಟಾದ್ವೈತ ಸಿದ್ಧವು ಲೋಕಾನುಸಾರವಾದ ಮತ. ಲೋಕದಲ್ಲಿ ರಾಜ, ಆವನ ಪ್ರಜೆ
ಪ್ರಜಾರಕ್ಷಣವು ರಾಜನ ಧರ್ಮ, ಇತ್ಯಾದಿ ವ್ಯವಸ್ಥೆಗಳಿರುವಂತೆ, ಭಗವಂತ, ಅವನಿಗೆ ಅಧೀನರಾದ
ರು, ಅವರುಗಳ ರಕ್ಷಣವು ಭಗವಂತನಿಗೆ ಸೇರಿದ್ದುದು ಇತ್ಯಾದಿಗಳು ಲೋಕ ನೀತಿಯನ್ನು ಅನುಸರಿಸಿವೆ.

**ತ-ದ್ವೈತ-ವಿಶಿಷ್ಟಾದ್ವೈತ ಪ್ರಭೇದಗಳಿಗೆ ನಿದಾನ–ಕಾರಣ**

ಬ್ರಹ್ಮ ಸೂತ್ರಗಳು ಜೀವನಿಗೂ ಬ್ರಹ್ಮಕ್ಕೂ ಭೇದವನ್ನು ಅನೇಕ ಕಡೆಗಳಲ್ಲಿ ಸಾರುತ್ತಿವೆ. ಜ್ಞಾಜ್ಞೌ
ಅಜೌ–ಈಶನೀಶೌ. ಜ್ಞನಿ, ಅಜ್ಞನಿ–ಇಬ್ಬರು–ಅಜರು–ನಿತ್ಯರು, ಒಬ್ಬ ಈಶ ಮತ್ತೊಬ್ಬ ಅನೀಶ. ನಿತ್ಯೋ
ನಾಂ ಚೇತನ ಶ್ಚೇತನಾನಾಂ, ಅಜಾಮೇಕಾಂ ಲೋಹಿತ ಶುಕ್ಲ ಕೃಷ್ಣಾಂ, ಅಜೋಹ್ಯೇಕೋ ಜುಷಮಾಣೋನು
ಜಹಾತ್ಯೇನಾಂ ಭುಕ್ತಭೋಗಾಮಜೋಽನ್ಯಃ, ಭೇದವ್ಯಪದೇಶಾತ್, ಅಧಿಕಂತು ಭೇದ ನಿರ್ದೇಶಾತ್,
ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್, ಇತ್ಯಾದಿ ಶ್ರುತಿ ಸೂತ್ರಗಳು ಸರ್ವಸಮ್ಮತ. ಹೀಗಿದ್ದರೂ ಮತ
ಕಾರಣವೇನೆಂದರೆ–ಅದ್ವೈತಿಗಳು, "ಮೃದಾತ್ಮಕೋಘಟಃ ಎಂಬಲ್ಲಿ ಆತ್ಮ ಶಬ್ದವು ಸ್ವರೂಪವಾಚೀ, ಮೃತ್ಸ್ವರೂ

ನೀಲೋಘಟಃ ಎಂದು ಅರ್ಥ ಹೇಳಿ ಹೀಗೆಯೇ ಐತದಾತ್ಮ್ಯಮಿದಂಸರ್ವಂ ತತ್ಸತ್ಯಂ,ಸ ಆತ್ಮಾ ತತ್ವಮಸಿ ಎಂಬ ಕಡೆಯಲ್ಲಿಯೂ ಆತ್ಮ ಶಬ್ದವು ಸ್ವರೂಪವಾಚೀ, ಆದ್ದರಿಂದ ಜೀವನಿಗೂ ಬ್ರಹ್ಮಕ್ಕೂ ಸ್ವರೂಪೈಕ್ಯವೇ ಶ್ರುತಿಗೆ ಮುಖ್ಯ ತಾತ್ಪರ್ಯ, ಹೀಗೆ ಅದ್ವೈತದಲ್ಲೇ ಶ್ರುತಿಗೆ ಮುಖ್ಯಗುರಿಃ ಮೇಲೆ ಹೇಳಿದ ಭೇದವು ವ್ಯವಹಾರ ದಶೆಯಲ್ಲಿ ಮಾತ್ರ ಅಂಗೀಕರಿಸಲ್ಪಡುತ್ತದೆ, ಶ್ರವಣ–ಮನನ–ನಿಧಿದ್ಯಾಸನಾ ನಂತರ ತತ್ವಮಸೀತ್ಯಾದಿ ವಾಕ್ಯದಿಂದ ಉಂಟಾಗುವ ಅಪರೋಕ್ಷ ಜ್ಞಾನದಿಂದಲೇ ಮುಕ್ತಿ, ಅಂದರೆ ಬ್ರಹ್ಮೈಕ್ಯ, ಎಂದು ಹೇಳಿದ್ದಾರೆ.ಹೀಗೆ ಆತ್ಮ ಶಬ್ದಕ್ಕೆ ಸ್ವರೂಪ ಪರವಾಗಿ ಅರ್ಥಮಾಡಿರುವುದೇ ಮೂಲ.

ದ್ವೈತಿಗಳು "ಇದಕ್ಕೆ ಪ್ರತಿಕೋಟಿಯಾಗಿ ಭೇದವೇ ಸತ್ಯ. ಮುಕ್ತಿ ಕಾಲದಲ್ಲೂ ಜೀವ ಬ್ರಹ್ಮರು ಅತ್ಯಂತ ಭಿನ್ನರು. ಜೀವನು ದಾಸಭೂತನು. ಐಕ್ಯವನ್ನು ಹೇಳುವ ಶ್ರುತಿಗಳು ಔಪಚಾರಿಕ. ಯದಧೀನಾಯಸ್ಯ ಸತ್ತಾ ತತ್ತದಿತ್ಯೇವ ಭಣ್ಯತೇ, ಎಂಬ ನ್ಯಾಯದಿಂದ ತಾದಧೀನ್ಯ ನಿಬಂಧನವಾಗಿ ಐಕ್ಯ ವ್ಯವಹಾರವು ಉಪಪನ್ನ. ಆತ್ಮ ಶಬ್ದವು 'ಸ್ವಾಮಿ' ಎಂಬರ್ಥದಲ್ಲಿ ಸ್ವರಸವೆಂದು ಸ್ವೀಕರಿಸಿ ಐಕ್ಯತೆಯನ್ನು ನಿರಾಕರಿಸಿದ್ದಾರೆ

ವಿಶಿಷ್ಟಾ ದ್ವೈತ ಮತದಲ್ಲಿ ಭಗವದ್ರಾಮಾನುಜಾಚಾರ್ಯರು "ವೇದಾಃ ಪ್ರಮಾಣಂ" ಎಂದು ಹೇಳಿದಂತೆ ಸರ್ವಶ್ರುತಿಗಳಿಗೂ ಮುಖ್ಯಾರ್ಥವನ್ನೇ ಹೇಳಿ ನಿರ್ವಾಹವನ್ನು ತೋರಿಸಿದ್ದಾರೆ ಆತ್ಮ ಶಬ್ದಕ್ಕೆ 'ಅಂತರ್ಯಾಮಿ' ಪರವಾಗಿ ಅರ್ಥಮಾಡಿ ಶರೀರಾತ್ಮ ಭಾವ ಸಂಬಂಧವನ್ನು ಆಧಾರವಾಗಿಟ್ಟುಕೊಂಡು ಭೇದಾಭೇದ ಶ್ರುತಿಗಳಿಗೆ ಮುಖ್ಯಾರ್ಥವನ್ನೇ ಕಲ್ಪಿಸಿರುತ್ತಾರೆ. ಪರಮಾತ್ಮನಿಯಾಮ್ಯತ್ವ, ತದೇಕಾಧಾರಕತ್ವಾದಿಗಳು ಲೌಕಿಕ ಪ್ರಮಾಣಾಗೋಚರವಾದರಿಂದ ಭೇದವನ್ನು ಹೇಳುವುದರಲ್ಲಿ ಈ ವಿಧವಾದ ಅಪೂರ್ವಾರ್ಥ ಬೋಧಕತ್ವವು ಉಪಪನ್ನ ಅಭೇದವೆಂದರೆ ಜೀವಬ್ರಹ್ಮರಿಗೆ ಸ್ವರೂಪೈಕ್ಯವಲ್ಲ, ನೀಲೋಘಟಃ, ದೇವೋಽಹಂ, ಮನುಷ್ಯೋಽಹಂ, ಎಂಬ ಪ್ರಯೋಗಗಳಲ್ಲಿ ನೀಲಗುಣಕ್ಕೂ ಘಟಕ್ಕೂ, ಹಾಗೆಯೇ ದೇವ ಮನುಷ್ಯಾದಿ ಶರೀರಕ್ಕೂ, ಅಹಂಪದಾರ್ಥಕ್ಕೂ ಐಕ್ಯವನ್ನು ಯಾರೂ ಒಪ್ಪಿಲ್ಲ. ಆದರೆ ನೀಲಾಭಿನ್ನಃ ಘಟಃ, ದೇವಾಭಿನ್ನಃ ಅಹಂ, ಮನುಷ್ಯಾಭಿನ್ನಃ ಅಹಂ, ಎಂದು ನೀಲೋಘಟಃ, ದೇವೋಽಹಂ ಇತ್ಯಾದಿ ಐಕ್ಯ ವ್ಯವಹಾರಕ್ಕೆ ಏನು ತಾತ್ಪರ್ಯವೆಂದರೆ – ನೀಲ ಪದವು ನೀಲಗುಣ ವಿಶಿಷ್ಟವಾಚಿ, ಹಾಗೆಯೇ ದೇವ ಮನುಷ್ಯ ಪದಗಳೂ, ದೇವಶರೀರ, ಮನುಷ್ಯ ಶರೀರ ವಿಶಿಷ್ಟವಾಚಿಗಳು. ಈ ರೀತಿ ಅಭೇದವು ಸಂಗತವಾಗುತ್ತೆ – ಘಟಸ್ಯನೈಲ್ಯಂ, ಮಮೇದಂ ಶರೀರಂ, ಇತ್ಯಾದಿ ಅತ್ಯಂತ ಭೇದವೇ ಸರಿ. ಐಕ್ಯವು ಗುಣ – ಗುಣಿಗಳಿಗಲ್ಲ, ಶರೀರಾತ್ಮಗಳಿಗೆ ಅಲ್ಲ. ನೀಲ ಗುಣವಿಶಿಷ್ಟವೂ ಘಟತ್ವಜಾತಿ ವಿಶಿಷ್ಟವೂ ಒಂದೇ. ಹಾಗೆಯೇ ದೇವ, ಮನುಷ್ಯ ಶರೀರ ವಿಶಿಷ್ಟನೂ, ಅಹಂತ್ವ ವಿಶಿಷ್ಟನೂ ಒಬ್ಬನೇ ಆದ್ದರಿಂದ ವಿಶಿಷ್ಟ ವೇಷದಿಂದ ಐಕ್ಯವು ಉಪಪನ್ನವೆಂಬುದು ಶಾಸ್ತ್ರಕಾರರು ಒಪ್ಪಿರುವ ಮಾತು ಹೀಗೆಯೇ ಶ್ರೀ ಭಾಷ್ಯಕಾರರೂ ಸಹ "ಅಹಂಬ್ರಹ್ಮಾಸ್ಮಿ" ಇತ್ಯಾದಿಗಳಲ್ಲಿ ಅಹಂ – ಚೇತನನು ಬ್ರಹ್ಮ ಶರೀರ ಭೂತನಾದ್ದರಿಂದ ಅಹಂತ್ವ ಪ್ರಕಾರಕ ಬ್ರಹ್ಮವು, ಬೃಹತ್ವ ವಿಶಿಷ್ಟವು ಎಂಬ ಐಕ್ಯವು ಸುಸಂಗತವೆಂದು ನಿರೂಪಿಸಿರುತ್ತಾರೆ. ಇದರಿಂದ ಜೀವ ಸ್ವರೂಪವು ಮುಕ್ತಿ ಕಾಲದಲ್ಲಿಯೂ ಪರಮಾತ್ಮ ಪರತಂತ್ರನೆಂಬುದು ಸಿದ್ಧವಾಗುತ್ತದೆ. ಈ ರೀತಿಯಲ್ಲಿ ವಿಶಿಷ್ಟ ನಿಷ್ಠವಾದ ಅದ್ವೈತವು – ಅಭೇದವು – ಸವಿಶೇಷಾದ್ವೈತವು ರಾಮಾನುಜೀಯರಿಂದ, ವಿಶಿಷ್ಟಾದ್ವೈತವೆಂದು ವ್ಯವಹರಿಸಲ್ಪಡುತ್ತದೆ. ಅಂದರೆ ಅಹಂ ಬ್ರಹ್ಮ, ಇತ್ಯಾದಿ ಸಾಮಾನಾಧಿಕರಣ್ಯದಿಂದ ಸ್ವರೂಪೈಕ್ಯವಲ್ಲ, ನಾನಾ ವಿಶೇಷಣಗಳಿಂದ ಕೂಡಿದ ವಿಶೇಷ್ಯವು ಒಂದೇ. ಅಹಂತ್ವ ಪ್ರಕಾರಕ, ಬೃಹತ್ವ ಪ್ರಕಾರಕ ಬ್ರಹ್ಮವೊಂದೇ ಎಂದು ತಾತ್ಪರ್ಯ.

ಈ ವಿಶಿಷ್ಟಾದ್ವೈತ ಮತದಲ್ಲಿ ಆತ್ಮಶಬ್ದವು ಮೇಲೆ ಹೇಳಿದಂತೆ ಸ್ವರೂಪ, ಸ್ವಾಮಿ–ಎಂಬ ಅರ್ಥಗಳನ್ನು ಬೋಧಿಸಿದರೂ, ಲೋಕ ಪ್ರಸಿದ್ಧಿ ಪ್ರಾಚುರ್ಯದಿಂದಲೂ, ಶ್ರುತಿ ಪ್ರಸಿದ್ಧಿಯಿಂದಲೂ, ಶರೀರ ಪ್ರತಿಸಂಬಂಧಿ ಚೇತನನನ್ನೇ ಝಟಿತಿ ಬೋಧಿಸುತ್ತದೆ ಗೋ ಶಬ್ದಕ್ಕೆ ಅನೇಕಾರ್ಥಗಳಿದ್ದರೂ, ಪ್ರಸಿದ್ಧಿ ಪ್ರಾಚುರ್ಯದಿಂದ ಹಸುವನ್ನೇ ತಿಳಿಸುತ್ತದೆಯಲ್ಲವೇ

ಹೀಗೆ ಚೇತನಾಚೇತನ, ಸಮಸ್ತ ಕಲ್ಯಾಣ ಗುಣ ಗಣ, ವಿಭೂತಿದ್ವಯ ವಿಶಿಷ್ಟನಾದ "ಶ್ರೀ ಮನ್ನಾರಾಯಣನು" ಒಂದೇ ತತ್ವ ಎಂಬ ತಾತ್ಪರ್ಯದಿಂದಲೂ "ವಿಶಿಷ್ಟಾದ್ವೈತ" ಎಂಬ ವ್ಯವಹಾರವು ಪ್ರಸಿದ್ಧವಾಗಿದೆ. ಸಜಾತೀಯ ಜೀವ, ವಿಜಾತೀಯ–ಅಚೇತನ, ಸ್ವಗತ ಗುಣ ವಿಗ್ರಹಾದಿ ಶೂನ್ಯವಾದ ನಿರ್ವಿಶೇಷ ಬ್ರಹ್ಮ ಒಂದೇ ಸತ್ಯ, ಅನ್ಯತ್ ಸರ್ವಂಮಿಥ್ಯಾ, ಎಂಬ ಮತಕ್ಕೆ ಪ್ರತಿಯಾಗಿ ಈ ವಿಧವಾದ ಮೂರು ವಸ್ತುಗಳೂ ಬ್ರಹ್ಮಕ್ಕೆ ಅಪೃಥಕ್ ಸಿದ್ಧ ವಿಶೇಷಣಗಳಾಗಿರುವುದರಿಂದ, ಇವುಗಳಿಂದ ಕೂಡಿದ ಅಂದರೆ ವಿಶಿಷ್ಟವಾದ ಬ್ರಹ್ಮ ಒಂದೇ ಸತ್ಯ, ಈ ವಿಶಿಷ್ಟಕ್ಕಿಂತ ಭಿನ್ನವಾದದ್ದು ಬೇರೆ ಯಾವುದೂ ಇಲ್ಲ– ಎಂಬುದು ಸಿದ್ಧಾಂತ. ಹಾಗೆಯೇ ಬ್ರಹ್ಮಕ್ಕೂ ಅದರ ಗುಣಗಳಿಗೂ ಭೇದವೇ ಸಿದ್ಧಾಂತ. ಐಕ್ಯವಿಲ್ಲಾ. ಅಭೇದವನ್ನು ಒಪ್ಪಿದರೆ ಏಕಾಂಶದಲ್ಲಿ ಸ್ವಗತ ಭೇದ ಶೂನ್ಯ ಎಂಬುದರಲ್ಲಿ ಅದ್ವೈತ ಪಕ್ಷವನ್ನು ಒಪ್ಪಿದಂತಾಗುತ್ತದೆ- ಅದನ್ನು ಒಪ್ಪದೆ ಸಮಸ್ತ ಕಲ್ಯಾಣ ಗುಣ ಪರಿಪೂರ್ಣವಾದ ಬ್ರಹ್ಮತತ್ವವನ್ನು ಭಗವದ್ರಾಮಾನುಜರು ಸಾಧಿಸಿದ್ದಾರೆ,

ಈ ರೀತಿಯಾಗಿ ಭೇದವು, ಚೇತನ, ಅಚೇತನ ಮತ್ತು ಬ್ರಹ್ಮಕ್ಕೂ, ಅಭೇದವು ಚೇತನಾಚೇತನ ವಿಶಿಷ್ಟ ಬ್ರಹತ್ವ ವಿಶಿಷ್ಟ ವಸ್ತುವಿಗೂ ಅಂಗೀಕರಿಸಲ್ಪಟ್ಟಿದೆ. ಇದನ್ನು ತಿಳಿದುಕೊಳ್ಳದೆ ಕೆಲವು ಪಂಡಿತಂ ಮನ್ಯರು, ಜೈನಮತದಲ್ಲಿ ಗುಣ ಗುಣಿಗಳಿಗೆ ಭೇದಾಭೇದವನ್ನು ಒಪ್ಪಿರುವಂತೆ ರಾಮಾನುಜ ಮತದಲ್ಲಿಯೂ ಜೀವ ಬ್ರಹ್ಮಗಳಿಗೆ ಭೇದಾಭೇದಗಳನ್ನು ಒಪ್ಪಿದ್ದಾರೆಂದು ಹೇಳುತ್ತಾರೆ. ಇದು ಅಜ್ಞಾನಮೂಲ. "ಅಂಶೋನಾನಾವ್ಯಪದೇಶಾತ್ ಅನ್ಯಥಾಚ" ಎಂಬ ಸೂತ್ರದಲ್ಲಿ ಅಂಶಾಂಶಿಗಳಿಗೆ, ಗುಣ ಗುಣಿಗಳಿಗೆ ಪರಸ್ಪರ ಭೇದವನ್ನು ಹೇಳಿ, ಗುಣವಿಶಿಷ್ಟ ಗುಣಿಯು ಒಂದೇ ಎಂಬಂತೆ ಜೀವನಿಗೂ (ವಿಶೇಷಣ), ಬ್ರಹ್ಮಕ್ಕೂ (ವಿಶೇಷ್ಯ) ಪರಸ್ಪರ ಭೇಧ, ಜೀವ ವಿಶಿಷ್ಟ ಬ್ರಹ್ಮಕ್ಕೆ ಅಂದರೆ ವಿಶಿಷ್ಟ ವೇಷದಲ್ಲಿ ಅಭೇದವೆಂಬುದನ್ನು ನಿರೂಪಿಸಿರುತ್ತಾರೆ. ಅದೇ ಅಧಿಕರಣದಲ್ಲಿ "ಪ್ರಕಾಶಾದಿವತ್ತು ನೈವಂಪರಃ" ಎಂದು ಸೂರ್ಯನಿಗೂ ಅವನ ಪ್ರಭೆಗೂ ಪರಸ್ಪರ ಭೇದವಿದ್ದರೂ ಪ್ರಭಾವಿಶಿಷ್ಟವಾದ ವಸ್ತುವು ಒಂದೇ ಎಂಬ ದೃಷ್ಟಾಂತವನ್ನು ಕೊಟ್ಟಿರುವುದೂ ಇಲ್ಲಿ ಗಮನಾರ್ಹ. ಆದ್ದರಿಂದ ವಿಶಿಷ್ಟಾದ್ವೈತವು ಅಪ್ರಕಂಪ್ಯವಾದ ಸಿದ್ಧಾಂತ.

**ಉಪಾಯ ಸ್ವರೂಪ**

ಅನಂತರ ಮೋಕ್ಷೋಪಾಯ ಸ್ವರೂಪವನ್ನು ನಿರೂಪಿಸುವವರಾಗಿ ಆ ಉಪಾಯವು, ಅವಿಧೇಯ–ವಿಧಿಸಲ್ಪಡದೆ, ಕೇವಲವಾಕ್ಯ ಜನ್ಯಜ್ಞಾನಾತ್ಮಕವೆಂದು ಹೇಳುವ ಅದ್ವೈತಮತವನ್ನು ಪ್ರಾಮಾಣಿಕವಲ್ಲವೆಂದು ನಿರೂಪಿಸಿ, ವಿಧೇಯಜ್ಞಾನಾತ್ಮಕ ವಿಶೇಷವಾದದ್ದು ಎಂದು ನಿರೂಪಿಸಿರುತ್ತಾರೆ. ಇದನ್ನೇ ಅನುಷ್ಠಾನದಿಂದ ಸಾಧಿಸಲ್ಪಡತಕ್ಕದ್ದು – ಸಾಧ್ಯೋಪಾಯ ಎಂದು ವ್ಯವಹರಿಸುತ್ತೇವೆ. ಈ ಸಾಧ್ಯೋಪಾಯದಿಂದ ವಶೀಕೃತನಾಗಿ ಮೋಕ್ಷವನ್ನು ಕೊಡುವ ಭಗವಂತನು ಸಿದ್ಧೋಪಾಯ. ಶ್ರೀ ಭಾಷ್ಯಮಂಗಳ ಶ್ಲೋಕ ವ್ಯಾಖ್ಯಾನದಲ್ಲಿ, "ರಕ್ಷೈಕದೀಕ್ಷೇ", "ಪರಸ್ಮಿನ್" ಎಂಬ ಸಪ್ತಮ್ಯಂತ ಪದಗಳಿಂದ ಉಪೇಯವಾದ (ಪ್ರಾಪ್ಯನಾದ) ಸಿದ್ಧೋಪಾಯವು ಹೇಳಲ್ಪಟ್ಟಿದೆ. "ಭಕ್ತಿರೂಪಾ ಶೇಮುಷೀ", ಎಂದು ಸಾಧ್ಯೋಪಾಯವು ತಿಳಿಸಲ್ಪಟ್ಟಿದೆ. "ವಿಶೇಷೇಣನತಾಃ –

ವಿನತಾಃ" ಎಂದು ನ್ಯಾಸೋಪಾಸನಾತ್ಮಕ "ಅಶೇಷ ವಿದ್ಯಾ ವಿಶೇಷ ನಿಷ್ಠಾಃ ವಿವಕ್ಷಿತಾಃ" ಎಂಬುದು ಶ್ರುತ ಪ್ರಕಾಶಿಕೆ – ಅಂದರೆ ನ್ಯಾಸ – ಪ್ರಪತ್ತಿ, ಉಪಾಸನೆ – ಭಕ್ತಿ, ಇವೆರಡೂ ಸಾಧ್ಯೋಪಾಯಗಳು. ಇವುಗಳನ್ನು ಅನುಷ್ಠಿಸುವವರೆಲ್ಲರೂ "ವಿನತ" ಎಂಬ ಪದದಲ್ಲಿ ವಿವಕ್ಷಿತರು. ಅವರುಗಳನ್ನು ರಕ್ಷಿಸುವುದೇ ಸಿದ್ಧೋಪಾಯನಾದ ಭಗವಂತನಿಗೆ ದೀಕ್ಷೆ – ಸಂಕಲ್ಪ ಭಕ್ತಿಯೋಗದಲ್ಲಿ ಸಾಮರ್ಥ್ಯವಿಲ್ಲದವನಿಗೆ ಪ್ರಪತ್ತಿಯು ವಿಧಿಸಲ್ಪಟ್ಟಿದೆಯಷ್ಟೇ. ನಿದಿಧ್ಯಾಸಿತವ್ಯಃ, ಮಾಮುಪಾಸ್ವ, ಮಾಮೇಕಂ ಶರಣಂವ್ರಜ, ಮುಮುಕ್ಷುರ್ವೈ ಶರಣಮಹಂಪ್ರಪದ್ಯೇ, ಇತ್ಯಾದಿಗಳು ಉಪಾಯವಿಧಾಯಕ ವಾಕ್ಯಗಳು. ಭಕ್ತಿಯು ಅಸಕೃದಾವೃತ್ತವಾದ, ಅಂದರೆ ನಿತ್ಯವೂ ಉಪಾಸನಾರೂಪ ಪ್ರೀತಿರೂಪಾಪನ್ನವಾದ ಜ್ಞಾನವಿಶೇಷ. ಪ್ರಪತ್ತಿಯೂ ಪ್ರೀತಿರೂಪಾಪನ್ನವಾದ ಜ್ಞಾನವಿಶೇಷವು. ಆದರೆ ಸಕೃತ್ – ಒಂದೇ ಸಲ ಅನುಷ್ಠಿಸಲ್ಪಡತಕ್ಕದ್ದು. ಆದ್ದರಿಂದ "ಜ್ಞಾನಾನ್ಮೋಕ್ಷಃ" ಎಂಬ ಉಕ್ತಿಗೆ ವಿರೋಧವಿಲ್ಲ. ಆ ಜ್ಞಾನವು ಕೇವಲ ವಾಕ್ಯಜನ್ಯವಾದ ಶಾಸ್ತ್ರಾರ್ಥ ಜ್ಞಾನವಿಲ್ಲ. ಅದಕ್ಕಿಂತ ಬೇರೆಯಾದ ವಿಧೇಯಾತ್ಮಕ ಉಪಾಸನ ರೂಪ ಜ್ಞಾನವಿಶೇಷವು. ಜ್ಞಾನ ಸ್ವರೂಪವು ಪ್ರಮಾಣ ತಂತ್ರವಾದ್ದರಿಂದ ವಿಧೇಯವಲ್ಲ. ಆವೃತ್ತಿ ವಿಶಿಷ್ಟವಾದದ್ದು ಪುರುಷತಂತ್ರವಾದ್ದರಿಂದ ವಿಧೇಯವೇ. ಭಕ್ತಿಯೋಗವು ಆವೃತ್ತಿ ವಿಶಿಷ್ಟವಾದ, ಜ್ಞಾನಾತ್ಮಕವು ಭಕ್ತಿಯೋಗವನ್ನು ಮಾಡಲು ಅಶಕ್ತನಿಗೆ ಪ್ರಪತ್ತಿಯು ವಿಧಿಸಲ್ಪಟ್ಟಿದೆ. "ನಹಿವಚನ ವಿರೋಧೇ ನ್ಯಾಯಃ ಪ್ರಭವತಿ".

ಶ್ರೀ ಭಾಷ್ಯಕಾರರು ಸಾಧನಾಧ್ಯಾಯದಲ್ಲಿ "ನಾನಾಶಬ್ದಾದಿ ಭೇದಾತ್" ಎಂಬ ಸೂತ್ರ (3–3–56)ವ್ಯಾಖ್ಯಾನದಲ್ಲಿ ಈ ಸಾಧನಗಳು ಅನೇಕವಾದವು, ಎಂದು ಸೂತ್ರದಲ್ಲಿರುವ "ಶಬ್ದ ಭೇದಾತ್" ಎಂಬ ಪದಸ್ವಾರಸ್ಯದಿಂದ ಭಕ್ತಿ ಪ್ರಪತ್ತಿಗಳೆರಡನ್ನೂ ವಿವಕ್ಷಿಸಿ ವ್ಯಾಖ್ಯಾನ ಮಾಡಿರುತ್ತಾರೆ ಧ್ಯಾನ ಉಪಾಸನೆ ಇತ್ಯಾದಿ ಪರ್ಯಾಯ ಶಬ್ದಗಳು ಏಕಾರ್ಥಬೋಧಕಗಳು. ಆದ್ದರಿಂದ ನ್ಯಾಸ ವಿದ್ಯೆಯನ್ನೂ ವಿವಕ್ಷಿಸಿದರೇನೇ ಶಬ್ದ ಭೇದವು ಏರ್ಪಡುತ್ತದೆ. ಈ ಅಂಶವು ಸೂತ್ರಕಾರ ವಿವಕ್ಷಿತವೆಂಬುದು "ಅಕ್ಷರ ವಿದ್ಯಾದಿಕಾ ಇತಿ ಆದಿ ಶಬ್ದೇನ ನ್ಯಾಸೋ ವಿವಕ್ಷಿತಃ ಸೂತ್ರೇಽಪಿ ಶಬ್ದಾದಿ ಭೇದ ಸದ್ಭಾವಾತ್" ಎಂಬ ಶ್ರುತ ಪ್ರಕಾಶಿಕಾ ವ್ಯಾಖ್ಯಾನದಿಂದ ಸ್ಪಷ್ಟ ಅಂಗ ಪ್ರಪತ್ತಿ ಪರವಾಗಿ ಗೀತಾ ಚರಮಶ್ಲೋಕಕ್ಕೆ ಶ್ರೀ ಭಾಷ್ಯಕಾರರು ವ್ಯಾಖ್ಯಾನ ಮಾಡಿ, ಶರಣಾಗತಿ ಗದ್ಯದಲ್ಲಿ ಸ್ವತಂತ್ರ ಪ್ರಪತ್ತಿ ಪರವಾಗಿ ವ್ಯಾಖ್ಯಾನ ಮಾಡಿರುವುದರಿಂದ ಅಕಿಂಚನರ ವಿಷಯದಲ್ಲಿ ಪ್ರಪತ್ತಿಯು ಸರ್ವಫಲವನ್ನೂ ಸಾಧಿಸಿ ಕೊಡಬಲ್ಲದೆಂಬುದು ನಿರೂಪಿಸಿದಂತಾಯಿತು

ಈ ಪ್ರಪತ್ತಿ ಸ್ವರೂಪ ವಿಷಯದಲ್ಲೂ ಇದರ ಅನುಷ್ಠಾನ ವಿಷಯದಲ್ಲಿಯೂ ಭಗವದ್ರಾಮಾನುಜರ ಅರ್ವಾಚೀನರಲ್ಲಿ ವಿಪ್ರತಿಪತ್ತಿಗಳು ತಲೆದೋರಿವೆ ಆದಾಗಿ ಸಿದ್ಧೋಪಾಯನಾದ ಭಗವಂತನೇ ಮೋಕ್ಷಪ್ರದನು. ಸಂಬಂಧ ಜ್ಞಾನವಿದ್ದರೆ ಸಾಕು. ನಾವು ಅತ್ಯಂತ ಪರತಂತ್ರರಾದ್ದರಿಂದ ಸಿದ್ಧೋಪಾಯ ನಿಷ್ಠರು ಯಾವ ಉಪಾಯವನ್ನೂ ಅನುಷ್ಠಿಸಕೂಡದು. "ಉಪಪತ್ತೇಶ್ಚ" (ಬ್ರಹ್ಮ ಸೂತ್ರ 3–2–34) ಎಂಬ ಸೂತ್ರಭಾಷ್ಯದಲ್ಲಿ "ಅನನ್ಯೋಪಾಯತ್ವಶ್ರವಣಾತ್" ಎಂದು ಭಗವದ್ಭಾಷ್ಯಕಾರರೇ ಹೇಳಿರುವಂತೆ ಭಗವಂತನೇ ಉಪಾಯ, ಬೇರೆ ಉಪಾಯಗಳು ಬೇಕಿಲ್ಲ ನಿರ್ಹೇತುಕ ಕೃಪೆಯಿಂದಲೇ ಮೋಕ್ಷವು ಲಭ್ಯ ಇದರಿಂದ ನಾವು ಯಾವುದನ್ನೂ ಅನುಷ್ಠಿಸದೆ

ಶರೈಸ್ತು ಸಂಕುಲಾಂ ಕೃತ್ವಾಲಂಕಾಂ ಪರಬಲಾರ್ದನಃ ।
ಮಾಂ ನಯೇದ್ಯದಿ ಕಾಕುತ್ಸ್ಥಃ ತತ್ತಸ್ಯ ಸದೃಶಂಭವೇತ್ ॥

ಎಂಬ ಸೀತಾದೇವಿಯಂತೆ ರಕ್ಷಕಾವಷ್ಟಂಭದಲ್ಲಿ ವಿಶ್ವಾಸದಿಂದಿದ್ದರೆ ಸಾಕು ಸ್ವರಕ್ಷಣಾರ್ಥ ವ್ಯಾಪಾರವು ಬೇಕಿಲ್ಲ. ಪತಿಭೋಗವೇ ಉದ್ದೇಶ್ಯ. ಪ್ರಪತ್ತಿ ಎಂಬುದು ಉಪಾಯಾಂತರವಲ್ಲ. ಪ್ರಪತ್ತಿರ್ವಿಶ್ವಾಸಃ, ಎಂದು ಭಗವಂತನು ರಕ್ಷಿಸುತ್ತಾನೆಂಬುದರಲ್ಲಿ ವಿಶ್ವಾಸ ಮಾತ್ರ, ಪಾಪಾನುಷ್ಠಾನದಲ್ಲಿ ಅಭಿಸಂಧಿಯು ಇಲ್ಲದೆ ಅಂದರೆ ಅಭಿಸಂಧಿ ವಿರಾಮ ಮಾತ್ರವು ಇರುವುದು ಸಾಕು. ಪ್ರಪತ್ತಿಯು ಅನಿವಾರಣ ಮಾತ್ರ – ಭಗವಂತನು ರಕ್ಷಿಸುವಾಗ ನಾವು ತಡೆಯದೆ ಇದ್ದರೆ ಸಾಕು, ಇತ್ಯಾದಿ ವಾದಗಳು ಹೊರಟಿವೆ

ಈ ಅತಿವಾದಗಳು ಭಗವಂತನ ಸ್ವಾತಂತ್ರ್ಯ, ಕರುಣೆ ಮತ್ತು ಸಂಬಂಧ ಜ್ಞಾನಗಳಿಂದ ಉಂಟಾದವು. ಇವುಗಳನ್ನು ಯಥಾರ್ಥವಾಗಿ ಸ್ವೀಕರಿಸಕೂಡದು ಸಿದ್ಧೋಪಾಯನಾದ ಭಗವಂತನೇ ಮೋಕ್ಷ ಪ್ರದನೆಂಬುದ ನಿರ್ವಿವಾದ ಆ ಭಗವಂತನು ಸ್ವತಂತ್ರನೂ, ಸಮರ್ಥನೂ, ಸಹಜಕಾರುಣ್ಯಶಾಲಿಯೂ ಆಗಿದ್ದರೂ ಅನಾದಿ ಕರ್ಮ ಪ್ರವಾಹಗಳೆಂಬ ಪುಣ್ಯಪಾಪಗಳಿಂದ ಕೂಡಿದ ಚೇತನನನ್ನು, ಸರ್ವಮುಕ್ತಿ ಪ್ರಸಂಗವೂ, ವೈಷಮ್ಯ ನೈರ್ಘೃಣ್ಯಾದಿ ಅಂದರೆ ಪಕ್ಷಪಾತ, ಕೃಪೆಯಿಲ್ಲದಿರುವುದು ಎಂಬ ದೋಷಗಳುಬಾರದೆ ಇರಲು ವ್ಯಾಜಸಾಪೇಕ್ಷಕ ನಾಗಿಯೇ ರಕ್ಷಿಸುತ್ತಾನೆಂಬುದು ಸಿದ್ಧಾಂತ. ಭಕ್ತಿ ಪ್ರಪತ್ತಿಗಳು ಭಗವಂತನ ನಿಗ್ರಹವನ್ನು ಶಮಿಸಿ ಅನುಗ್ರಹ ವನ್ನು ಉಂಟುಮಾಡುತ್ತವೆ ಇವು ಪ್ರಸಾದಜನಕವಾದ ವ್ಯಾಜಗಳು. ವ್ಯವಹಿತ ಮೋಕ್ಷೋಪಾಯಗಳು. "ಮೋಕ್ಷಯಿಷ್ಯಾಮಿ" ಎಂದು ಸಂಕಲ್ಪಿಸುವ ಭಗವಂತನೇ ಅವ್ಯವಹಿತವಾದ ಮೋಕ್ಷೋಪಾಯಭೂತನು ಆಶ್ರಿತ ರನ್ನು ರಕ್ಷಿಸಲು ಸಿದ್ಧನಾಗಿರುವ ಉಪಾಯ. ಸಿದ್ಧೋಪಾಯನು ಸಂಬಂಧ ಜ್ಞಾನಾದಿಗಳು ಸಹಕಾರಿ ಕಾರಣಗಳು ಅಷ್ಟೇ. ಸ್ತನಂಧಯ ಪ್ರಜೆಗೆ (ಮಗುವಿಗೆ) ತಾಯಿಯು ತಾನೇ ಪ್ರೀತಿಯಿಂದ ಮೊಲೆಯನ್ನು ಕೊಟ್ಟರೂ' ಸ್ತನ್ಯವನ್ನು ನಿಗರಣ ಮಾಡುವ ವ್ಯಾಪಾರವು ಮಗುವಿಗೆ ಸೇರಿದಂತೆ ಜೀವನಿಗೆ ಭಗವದಧೀನವಾದ ಸ್ವವ್ಯಾ ಪಾರವೂ ಸೇರಿಯೇ ಇದೆ 'ಕರ್ತಾಶಾಸ್ತ್ರಾರ್ಥವತ್ವಾತ್' ಎಂಬ ಸೂತ್ರದಲ್ಲಿ ಜೀವನಿಗೆ ಕರ್ತೃತ್ವವು ವಿಹಿತ ಇದು ಪರಾತ್ತು ತಚ್ಛ್ರುತೇಃ" ಎಂಬ ಸೂತ್ರದ ಪ್ರಕಾರ ಭಗವದಧೀನ ಕರ್ತೃತ್ವ. ಕರಣ ಕಳೇಬರ, ಬುದ್ಧಿ, ಸ್ವಾತಂತ್ರ್ಯಾದಿ ಪ್ರದಾನಗಳನ್ನು ಸೃಷ್ಟಿಕಾಲದಲ್ಲಿ ಭಗವಂತನು ಎಲ್ಲಾ ಚೇತನರಿಗೂ ಸಮಾನವಾಗಿಯೇ ನಿರ್ಹೇತುಕ ಕೃಪೆಯಿಂದಲೇ ಕೊಡುತ್ತಾನೆ. ಶರೀರಾದಿ ಭೇದವು ಕರ್ಮ ನಿಬಂಧನ. ಆತ್ಮಕ್ಷೇಮ ಸಂಪಾದನೆಯು ಅವರವರ ಬುಧ್ಯಧೀನ.

'ಶರೈಸ್ತು ಸಂಕುಲಾಂಕೃತ್ವಾ" ಇತ್ಯಾದಿ ಸೀತೆಯು ಸ್ವರಕ್ಷಣಾರ್ಥ ವ್ಯಾಪಾರದಲ್ಲಿ ತನಗೆ ಯಾವ ಅನ್ವಯವೂ ಇಲ್ಲದೆ ಶ್ರೀರಾಮಚಂದ್ರನ ಕರುಣೆಯನ್ನೇ ಎದುರು ನೋಡುತ್ತಿದ್ದಳೆಂಬುದು, "ದತ್ತಾಃ ಪ್ರಜಾ ಜನಕವತ್ ತವದೇಶಿಕೇಂದ್ರೈಃ ಪತ್ಯಾಭಿನಂದ್ಯ ಭವತಾಪರಿಣೀಯಮಾನಾಃ" ಎಂಬ ಶರಣಾಗತಿದೀಪಿಕಾ (ಶ್ಲೋ30) ಶ್ರೀ ಸೂಕ್ತಿಯ ಪ್ರಕಾರ, ಜನಕನು ತನ್ನನ್ನು ಶ್ರೀ ರಾಮಚಂದ್ರನಿಗೆ ಮದುವೆ ಮಾಡಿಕೊಟ್ಟ ನಂತರ ಪತಿ ಪಾರಾ ರ್ಥ್ಯದಿಂದ ಸೀತೆಯು ಹೇಳಿದ ಮಾತು. ಇಲ್ಲಿ ವಿವಾಹವೇ ಶರಣಾಗತಿ ಸ್ಥಾನಾಪನ್ನ ಹಾಗೆಯೇ ಆಚಾರ್ಯರುಗಳ ಮೂಲಕ ಆತ್ಮರಕ್ಷಾ ಭರವನ್ನು ಭಗವಂತನಲ್ಲಿ ಮಾಡಿದ ನಂತರ ಪ್ರಪನ್ನನು ಸ್ವರಕ್ಷಣಾರ್ಥದಲ್ಲಿ ಬೇರೆ ಯಾವ ಪ್ರಯತ್ನವನ್ನೂ ಮಾಡಬೇಕಿಲ್ಲವೆಂಬುದು ತಾತ್ಪರ್ಯವೇ ಹೊರತು, ಉಪಾಯಾನುಷ್ಠಾನವೇ ಬೇಕಿಲ್ಲವೆಂದು ಅರ್ಥವಲ್ಲ ಈ ರೀತಿಯಲ್ಲಿಪ್ರಾಚೀನರ ಶ್ರೀ ಸೂಕ್ತಿಗಳಿಗೆ ಅವಿರೋಧವನ್ನು ಆಚಾರ್ಯರೇ ತೋರಿಸಿಕೊಟ್ಟಿ ರುವುದು ಗಮನಾರ್ಹ.

ಹೀಗೆಯೇ, "ಭುಂಕ್ತೇಸ್ವಭೋಗ ಮಖಿಲಂಪತಿ ಭೋಗಶೇಷಮ್" ಎಂದು ಪ್ರಧಾನ ಫಲಿತ್ವವು ಭಗವಂತನಿ ಗಾದರೂ ಪತಿಭೋಗ ಶೇಷವಾದ ಸ್ವಭೋಗವು ಜೀವನಿಗೆ ಸಿದ್ಧಿಸುತ್ತದೆ ತನ್ನ ಫಲಕ್ಕಾಗಿ ಎಂದು ಅನುಸಂಧಾನ ಮಾಡ ಬಾರದು ಆನುಷಂಗಿಕವಾದ ಫಲವೇ ಇಲ್ಲವೆಂದರೆ, ಅಚೇತನತ್ವವು ಪ್ರಾಪ್ತವಾಗುತ್ತದೆ ಆದ್ದರಿಂದ ಬದ್ಧಜೀವನು ಮೋಕ್ಷಾರ್ಥವಾಗಿ ಶರಣಾಗತಿಯನ್ನು ಅನುಷ್ಠಿಸಲೇ ಬೇಕು ಹಾಗೆ ಶಾಸ್ತ್ರವಶ್ಯನಾದ ಇವನಿಗೆ ಅನುಷ್ಠಾನವು ಸ್ವ ರೂಪ ವಿರುದ್ಧವಲ್ಲ. ಇವನ ಈಶ್ವರ ಪಾರತಂತ್ರ್ಯಕ್ಕೂ ವಿರೋಧವಾಗಲಾರದು. ಇದನ್ನು ಒಪ್ಪದಿದ್ದರೆ ಅತ್ಯಂತ ಪರತಂತ್ರನಾದ ಈ ಬದ್ಧ ಜೀವನು ಭೋಜನಾದಿ ವ್ಯಾಪಾರಗಳನ್ನೂ ಮಾಡದೇ ಇರಬೇಕಾದ ಪ್ರಸಂಗವು ಬರು ತ್ತದೆ ಭಗವಂತನ ಶಾಸನ ರೂಪವಾದ ಶಾಸ್ತ್ರ ವ್ಯಾಕುಲತೆಯು ಏರ್ಪಡುತ್ತದೆ, ಶಾಸ್ತ್ರವಿಹಿತ ವ್ಯಾಪಾರ ವನ್ನು ಮಾಡುವುದು ದಾಸನ ಕರ್ತವ್ಯವಲ್ಲವೇ.

ಹಾಗೆಯೇ "ಉಪಪತ್ತೇಶ್ಚ" ಎಂಬ ಸೂತ್ರ ಭಾಷ್ಯದಲ್ಲಿ 'ಅನನ್ಯೋಪಾಯತ್ವ ಶ್ರವಣಾತ್' ಎಂದು ಹೇಳಿರುವುದು **ಸಿದ್ಧೋಪಾಯ** ವಿಷಯ. ಮುಂದೆ "ಫಲಮತ ಉಪಪತ್ತೇಃ"(4–2–37)ಎಂಬ ಸೂತ್ರಭಾಷ್ಯದಲ್ಲಿ, "ಸಏವಹಿ ಯಾಗದಾನ ಹೋಮಾದಿಭಿಃ **ಉಪಾಸನೇನಚ ಆರಾಧಿತಃ** ಐಹಿಕಾಮುಷ್ಮಿಕ ಭೋಗಜಾತಂ ಸ್ವ ಸ್ವರೂಪಾವಿರ್ಭಾವ ರೂಪಮಪವರ್ಗಂಚ ದಾತುಮೀಷ್ಟೇ" ಎಂದು **ಸಾಧ್ಯೋಪಾಯ** ದಿಂದ ಪ್ರೀತನಾದ ಭಗವಂತನೇ ಫಲಪ್ರದನೆಂದು ಹೇಳಿರುವುದು ಗಮನಾರ್ಹ ಇದು ಸಿದ್ಧೋಪಾಯ ಪ್ರಾಧಾನ್ಯತೆಯನ್ನು ಪುಷ್ಟೀಕರಿಸಿ, ಸಾಧ್ಯೋಪಾಯದ ಆವಶ್ಯಕತೆಯನ್ನೂ ಸ್ಥಿರೀಕರಿಸುತ್ತದೆಯಲ್ಲವೇ.

ಹೀಗೆ ಸಂಪ್ರದಾಯಗಳಲ್ಲಿ ಯಥಾಶ್ರುತವಾಗಿ ತೋರಿ ಬರುವ ಅಭಿಪ್ರಾಯ ಭೇದಗಳನ್ನೆಲ್ಲಾ ವಿವರಿಸಿ ತಾತ್ಪರ್ಯವನ್ನು ನಿರೂಪಿಸಿ, ಶ್ರೀ ಭಾಷ್ಯಕಾರರ ಶಿಷ್ಯಪರಂಪರೆಗಳಲ್ಲಿ ಐಕರಸ್ಯವನ್ನೇ ಆಚಾರ್ಯರು ಪ್ರತಿಪಾದಿಸಿರುತ್ತಾರೆ,

ಇತ್ಥಂ ಅರ್ಥಾವಿಶೇಷೇऽಪಿ ಯೋಜನಾಭೇದ ಮಾತ್ರತಃ ।

ಪ್ರಾಚಾಂ ವಿವಾದ ಸ್ಸಂವೃತ್ತಃ ಭಾಷ್ಯಕಾರೈರವಾರಿತಃ ॥

ಎಂಬ ಆಚಾರ್ಯ ಶ್ರೀ ಸೂಕ್ತಿಯು ಇಲ್ಲಿ ಅನುಸಂಧೇಯ.

ಶ್ರೀ ಭಾಷ್ಯಕಾರರು ವೇದಾರ್ಥ ಸಂಗ್ರಹದಲ್ಲಿ. "ಪರಮ ಪುರುಷಚರಣಾರವಿಂದಯುಗಳ ನ್ಯಸ್ತಾತ್ಮಾತ್ಮೀಯಸ್ಯ, ಎಂದು ಹೇಳಿರುತ್ತಾರೆ. "ಭಗವತಿನ್ಯಸ್ತ ಭರತ್ವಮಾಹ" ಎಂಬುದು ತಾತ್ಪರ್ಯ ದೀಪಿಕೆ

"ದೈವೀಹ್ಯೇಷಾಗುಣಮಯೀ ಮಮಮಾಯಾ ದುರತ್ಯಯಾ ।

ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿತೇ ॥"

ಎಂಬ ಗೀತಾ ಶ್ಲೋಕಕ್ಕೆ ವ್ಯಾಖ್ಯಾನವಾಗಿ, "ತಸ್ಯೈತಸ್ಯಾತ್ಮನಃ ಕರ್ಮಕೃತ ವಿಚಿತ್ರ ಗುಣಮಯ ಪ್ರಕೃತಿ ಸಂಸರ್ಗ ರೂಪಾತ್ಸಂಸಾರಾನ್ಮೋಕ್ಷೋ ಭಗವತ್ಪ್ರಪತ್ತಿಮಂತರೇಣ ನೋಪಪದ್ಯತೇ, ಇತ್ಯುಕ್ತಂಭವತಿ ನಾನ್ಯಃ ಪಂಥಾ ಅಯನಾಯ ವಿದ್ಯತೇ, ಇತ್ಯಾದಿ ಶ್ರುತಿಭಿಶ್ಚ", ಎಂದು ಹೇಳಿರುತ್ತಾರೆ ವೈಕುಂಠ ಗದ್ಯದಲ್ಲಿಯೂ, "ತತ್ಪ್ರಾಪ್ತಯೇ ತತ್ಪಾದಾಂಬುಜ ದ್ವಯ ಪ್ರಪತ್ತೇರನ್ಯನ್ನಮೇಃ ಕಲ್ಪಕೋಟಿ ಸಹಸ್ರೇಣಾಪಿ ಸಾಧನಮಸ್ತಿ" ಎಂದೂ, "ತಸ್ಯೈಚವಶೀಕರಣಂ ತಚ್ಛರಣಾಗತಿರೇವ" ಎಂದು ಆನುಮಾನಿಕಾಧಿಕರಣ (1–4–1) ಭಾಷ್ಯದಲ್ಲೂ ಶ್ರೀ ಭಾಷ್ಯಕಾರರು ಅನುಗ್ರಹಿಸಿರುವುದನ್ನು ಪ್ರಾಮಾಣಿಕರು ಅಂಗೀಕರಿಸಬೇಕು

ನಾವು ಪ್ರಪತ್ತಿಯನ್ನು ಒಪ್ಪುತ್ತೇವೆ ಆ ಪ್ರಪತ್ತಿಯು "ತ್ವಮೇವೋಪಾಯಭೂತೋಮೇ ಭವೇತಿ ಪ್ರಾರ್ಥನಾಮತಿಃ–ಶರಣಾಗತಿರಿತ್ಯುಕ್ತಾ" ಎಂದು ಭಗವಂತನೇ ಉಪಾಯವೆಂದಿರುವ ಬುದ್ಧಿ ಮಾತ್ರವೆಂಬುದು ಮತ್ತೊಂದುವಾದ ಈ ಶ್ಲೋಕಕ್ಕೆ ಆರಂಭದಲ್ಲಿ "ಅಹಮಸ್ಮ್ಯಪರಾಧಾನಾಮಾಲಯೋऽಕಿಂಚನೋऽಗತಿಃ" ಎಂದೂ ಕೊನೆಯಲ್ಲಿ ಸಾದೇವೇऽಸ್ಮಿನ್ ಪ್ರಯುಜ್ಯತಾಂ," ಎಂಬ ವಿಧಿಯೂ, ಪ್ರಾರ್ಥನಾಮತಿ"–ಪ್ರಾರ್ಥನಾ ರೂಪವಾದ ಬುದ್ಧಿ ವಿಶೇಷವೆಂದೂ ಹೇಳಿರುವುದನ್ನು ಗಮನಿಸಬೇಕು. ಇದು,

"ಅನನ್ಯಸಾಧ್ಯೇ ಸ್ವಾಭೀಷ್ಟೇ ಮಹಾ ವಿಶ್ವಾಸ ಪೂರ್ವಕಂ ।

ತದೇಕೋಪಾಯತಾ ಯಾಂಚಾ ಪ್ರಪತ್ತಿಶ್ಶರಣಾಗತಿಃ ॥"

ಎಂಬ ಭರತಮುನಿ ಪ್ರಣೀತ ಶರಣಾಗತಿ ಸ್ವರೂಪವನ್ನು ನಿರೂಪಿಸುವ ವಾಕ್ಯಕ್ಕೆ ಸಮಾನಾರ್ಥಕ. ಆದಾಗಿ ತನ್ನಿಂದ

ರಕ್ಷಿಸಿಕೊಳ್ಳಲಾಗದ ವಸ್ತುವನ್ನು ರಕ್ಷಿಸಲು ಸಮರ್ಥನಾದವನಲ್ಲಿ ರಕ್ಷಿಸಿಕೊಡು ಎಂದು ಪ್ರಾರ್ಥಿಸಿ ಸಮರ್ಪಿಸುವದು ಶರಣಾಗತಿ, ಎಂದು ಹೇಳಿದೆಯಾದ್ದರಿಂದ, ವಿಧೇಯಾತ್ಮಕವಾದ ಸ್ವಾತ್ಮರಕ್ಷಾಭರಸಮರ್ಪಣ ರೂಪ ಪುರುಷ ತಂತ್ರವಾದ ಜ್ಞಾನವಿಶೇಷ. ಹೀಗೆ ಒಪ್ಪದಿದ್ದರೆ, ಮಾಯಾವಾದಿಗಳು ಹೇಳುವ ಅವಿಧೇಯ ಜ್ಞಾನಕ್ಕೆ ಸಮಾನವಾಗುತ್ತದೆ ಈ ವಿಷಯಗಳನ್ನೆಲ್ಲಾ ಆಚಾರ್ಯರು ಈ ಗ್ರಂಥದಲ್ಲಿ ವಿಸ್ತಾರವಾಗಿ ನಿರೂಪಿಸಿರುತ್ತಾರೆ

## ಲಕ್ಷ್ಮೀವಿಭುತ್ವ

ಚಿದಚಿದ್ವಿಶಿಷ್ಟ ಬ್ರಹ್ಮವು ಜಗತ್ಕಾರಣವಾದ ವಸ್ತು. ಆ ಬ್ರಹ್ಮವು, ದೇವತಾಂತರ ವ್ಯಾವೃತ್ತವಾದ ಲಕ್ಷ್ಮೀ ವಿಶಿಷ್ಟ ನಾರಾಯಣನು ಉಪಾಯೋಪೇಯತ್ವಗಳು ಇಬ್ಬರಿಗೂ ಉಂಟು. ಅಂದರೆ ಮೋಕ್ಷವನ್ನು ಕೊಡುವವರೂ ಅವರಿಬ್ಬರೇ ಮೋಕ್ಷದಲ್ಲಿ ಪ್ರಾಪ್ಯಭೂತರೂ ಅವರಿಬ್ಬರೇ ಎಂಬುದು ಸಿದ್ಧಾಂತ "ಶ್ರದ್ಧಯಾ ದೇವೋ ದೇವತ್ವಮಶ್ನುತೇ", ಅಸ್ಯೇಶಾನಾಜಗತೋ ವಿಷ್ಣೋ ಪತ್ನೀ" ಎಂಬಿವೇ ಮೊದಲಾದ ಶ್ರುತಿಗಳು ಲಕ್ಷ್ಮೀವಿಶಿಷ್ಟ ನಾರಾಯಣನನ್ನು ಜಗತ್ಕಾರಣನು ಎಂದು ಸಾರುತ್ತವೆ.

ಹೀಗಿರುವಾಗ ಲಕ್ಷ್ಮಿಯು ವಿಭುವೇ, ಅಣುವೇ, ಜೀವಕೋಟಿಗೆ ಸೇರಿದವಳೇ, ಈಶ್ವರ ಕೋಟಿಗೆ ಸೇರಿದವಳೇ, ಇವಳು ಮೋಕ್ಷ ಪ್ರದಳೇ, ಉಪಾಯಭೂತಳೇ, ಅಲ್ಲವೇ ಇತ್ಯಾದಿ ವಿಪ್ರತಿಪತ್ತಿಗಳು ಅರ್ವಾಚೀನರಲ್ಲಿ ತಲೆದೋರಿವೆ ಮಹಾಲಕ್ಷ್ಮಿಯು ಬ್ರಹ್ಮ ಶಬ್ದವಾಚ್ಯೆ ಎಂಬುದು, (1) "ಯುಜೇವಾಂ ಬ್ರಹ್ಮ ಪೂರ್ವ್ಯಂ ನಮೋಭಿರ್ವಿ ಶ್ಲೋಕ ಏತು ಪಥ್ಯೇವಸೂರೇಃ", ಋಕ್ ಸಂಹಿತೆ (10–13–1) (2) ಇಮಾಂ ಬ್ರಹ್ಮ ಸರಸ್ವತೀ ಜುಷಸ್ವವಾಜಿನೀವತಿ (ಋ. ಸಂ. 2–41–8) (3) ಮೂಲ ಪ್ರಕೃತಿ ರೇಕಾಸಾ ಪೂರ್ಣ ಬ್ರಹ್ಮ ಸ್ವರೂಪಿಣೀ (ಬ್ರಹ್ಮ ವೈ. ಪು. 1–30–18) ಮೂಲಪ್ರಕೃತಿಃ – ಮೂಲಪ್ರಕತ್ಯಭಿಮಾನಿ ದೇವತಾ ಇತ್ಯಾದಿ ಪ್ರಮಾಣಗಳಿಂದ ಸಿದ್ಧ ಇದರಿಂದ ಲಕ್ಷ್ಮಿಯು ಈಶ್ವರ ಕೋಟಿಗೆ ಸೇರಿದವಳು ಇವಳು ನಾರಾಯಣನಿಗೆ ಪತಿಪತ್ನೀ ಭಾವದಿಂದ ನೇಚ್ಛೆಯಿಂದ ಅಧೀನಳು ವಿಶೇಷಣಳು ಲಕ್ಷ್ಮೀವಿಶಿಷ್ಟನಾರಾಯಣನು ಬ್ರಹ್ಮ ಶಬ್ದ ವಾಚ್ಯನು "ವ್ಯಾಪಕಾವತಿ ಸಂಶ್ಲೇಷಾದೇಕ ತತ್ವಮಿವೋದಿತೌ", ಎಂದು ಭಗವಂತನಿಗೆ ಅಪೃಥಕ್ಭೂತ ಶೇಷ ಭೂತಳು ಲಕ್ಷ್ಮೀ. ತದ್ವಿಶಿಷ್ಟವಾದ ಪರತತ್ವವು "ಬ್ರಹ್ಮಾದ್ವೈತ"ವೆಂದು ಹೇಳಲ್ಪಡುತ್ತದೆ. ಅಂದರೆ ಇಬ್ಬರೂ ಸೇರಿ ಏಕತತ್ವವೆನ್ನುವಂತೆ, ಇರುತ್ತಾರೆ. "ಕಾಮವತ್ಸ್ಸಮೃತಂದುಹಾನಾ" ಎಂದೂ, "ವಿಮುಕ್ತಿಫಲದಾಯಿನೀ" ಎಂಬುದೂ ಲಕ್ಷ್ಮಿಯು ಮೋಕ್ಷ ಪ್ರದಳು ಎಂಬುದಕ್ಕೆ ಪ್ರಮಾಣಗಳು. "ದಾಯಿನೀ" ಎಂಬಲ್ಲಿ ತಾಚ್ಛೀಲ್ಯೇಣಿನಿ ಪ್ರತ್ಯಯ. ದಾಯಿನೀ – ಕೊಡುವ ಸ್ವಭಾವಳು ಎಂದು ಅರ್ಥ. ಕೊಡಿಸುವವಳನ್ನೂ ಕೊಡುವವಳೆಂದು ಔಪಚಾರಿಕವಾಗಿ ಹೇಳಬಹುದಾದರೆ, "ದಾಪಿನೀ" ಎಂದಿರಬೇಕು

"ಯಥಾ ಸರ್ವಗತೋ ವಿಷ್ಣುಃ ತಥೈವೇಯಂದ್ವಿಜೋತ್ತಮ" ಎಂಬ ವಿಷ್ಣು ಪುರಾಣ ವಚನವು ಲಕ್ಷ್ಮಿಯು ಭಗವಂತನ ಹಾಗೆ ವಿಭು (ಸರ್ವಗತೆ) ಸ್ವರೂಪೆ ಎಂದು ಹೇಳುತ್ತದೆ. ಯಥಾ ತಥಾ ಎಂಬ ಶಬ್ದಗಳು ಪ್ರಕಾರ ವಾಚಿ ವಿಷ್ಣುವು ವಿಭುವಾಗಿ ಸರ್ವಗತನಾಗಿರುವಂತೆ ಇವಳೂ ವಿಭು ಸ್ವರೂಪೆ ಎಂದು ಹೇಳಿದರೇನೇ ಯಥಾ ತಥಾ ಶಬ್ದಗಳು ಸ್ವರಸವಾಗುತ್ತವೆ. ಇವಳು ಧರ್ಮ ಭೂತಜ್ಞಾನದಿಂದ ವಿಭುಸ್ವರೂಪಳು. ಸ್ವರೂಪದಲ್ಲಿ ಅಣು, ಎಂದು ಹೇಳುವುದಕ್ಕೆ ಮೂಲ ಪ್ರಮಾಣವಿಲ್ಲ ಭಗವಂತನ ಹಾಗೆ ಉಪಾಯಭೂತೆಯೂ ಪ್ರಾಪ್ಯಭೂತೆಯೂ ಆದ ಲಕ್ಷ್ಮಿಗೆ ಪುರುಷಕಾರತ್ವವು ಹೆಚ್ಚಿನದು.

ದ್ವಯಮಂತ್ರದ ಉತ್ತರ ಖಂಡದಲ್ಲಿ 'ಶ್ರೀಮತೇ' ಎಂದು ಶ್ರೀ ವಿಶಿಷ್ಟನು ಉಪೇಯವೆಂದರೆ ಪೂರ್ವ ಖಂಡದಲ್ಲಿಯೂ 'ಶ್ರೀಮತ್' ಶಬ್ದಕ್ಕೆ ಶ್ರೀ ವಿಶಿಷ್ಟನೇ ಉಪಾಯವೆಂದು ಹೇಳುವುದು ಸ್ವರಸವಲ್ಲವೇ ಈ ಅರ್ಥಗಳನ್ನೆಲ್ಲಾ ಆಚಾರ್ಯರು ಈ ಗ್ರಂಥದಲ್ಲಿ ಅಲ್ಲಲ್ಲೇ ನಿರೂಪಿಸಿರುತ್ತಾರೆ

**ಪುರುಷಾರ್ಥ ವಿಚಾರ**

ಪರಮ ಪದದಲ್ಲಿ ಲಕ್ಷ್ಮೀ ವಿಶಿಷ್ಟ ನಾರಾಯಣನನ್ನು ಅರ್ಚಿರಾದಿ ಮಾರ್ಗವಾಗಿ ಪಡೆದು ಅವನನ್ನು ಅನುಭವಿಸಿ, ಅನುಭವಪರಿವಾಹವಾದ ಕೈಂಕರ್ಯವನ್ನು ಮಾಡುವುದೇ ಪರಮಪುರುಷಾರ್ಥವೆಂದು ಆಚಾರ್ಯರು ವ್ಯವಸ್ಥೆಗೊಳಿಸಿದ್ದಾರೆ ಜೀವ ಬ್ರಹ್ಮೈಕ್ಯವೇ ಮೋಕ್ಷವೆಂಬ ಅದ್ವೈತ ಮತವನ್ನೂ, ಜೀವ ಬ್ರಹ್ಮರಿಗೆ ಮೋಕ್ಷದಲ್ಲಿ ಆನಂದ ತಾರತಮ್ಯವನ್ನು ಹೇಳುವ ದ್ವೈತಪಕ್ಷವನ್ನೂ ನಿರಾಕರಿಸಿ, "ಭೋಗಮಾತ್ರಸಾಮ್ಯಲಿಂಗಾಚ್ಚ", ಜಗದ್ವ್ಯಾಪಾರವರ್ಜಂ' ಇತ್ಯಾದಿ ಬ್ರಹ್ಮಸೂತ್ರಗಳನ್ನು ಅನುಸರಿಸಿ "ಭಜತಿ ಪರಮಂಸಾಮ್ಯಂ ಭೋಗೇ ನಿವೃತ್ತಿಕಥೋಜ್ಝಿತಮ್', ಎಂದು ಪುನರಾವರ್ತಿಯಿಲ್ಲದೆ ಪರಿಪೂರ್ಣ ಬ್ರಹ್ಮಾನುಭವರೂಪ ಭೋಗದಲ್ಲಿ ಪರಮ ಸಾಮ್ಯವು, ಎಂದು ಆಚಾರ್ಯರು ನಿಗಮಿಸಿದ್ದಾರೆ

**ನಿಗಮನ**

ಹೀಗೆ ಶ್ರೀಮನ್ನಿಗಮಾಂತ ಮಹಾದೇಶಿಕರವರು ಅನುಗ್ರಹಿಸಿರುವ ರಹಸ್ಯತ್ರಯಸಾರವೆಂಬ ಗ್ರಂಥ ರತ್ನಕ್ಕೆ ಅನಪೇಕ್ಷಿತಾರ್ಥ ವಿಸ್ತಾರವಿಲ್ಲದೆ, ಅಪೇಕ್ಷಿತಾರ್ಥ ಸಂಕ್ಷೇಪವೂ ಇಲ್ಲದೆ, ಪೂರ್ವಾಚಾರ್ಯರುಗಳ ವ್ಯಾಖ್ಯಾನಗಳ ಆಧಾರದ ಮೇಲೆಯೂ, ಸತ್ಸಂಪ್ರದಾಯಾಗತ ಸಮೀಚೀನ ಶಾಸ್ತ್ರಾರ್ಥೋಪದೇಶಾದಿ ಆಧಾರದ ಮೇಲೆಯೂ, ಶ್ರೀಮಾನ್ ಸರಗೂರು ಮಾಡಭೂಷಣಂ ಕೃಷ್ಣಮಾಚಾರ್ಯರು ಆಸ್ತಿಕ ಲೋಕೋಪಕಾರಕ್ಕಾಗಿ 'ಸಾರ ಚಂದ್ರಿಕಾ' ಎಂಬ ವ್ಯಾಖ್ಯಾನವನ್ನು ಕನ್ನಡ ಭಾಷೆಯಲ್ಲಿ ಬರೆದಿರುವುದು ಬಹಳ ಶ್ಲಾಘನೀಯ ಪ್ರತೀಕವಾಗಿ ಆಚಾರ್ಯರು ಎತ್ತಿ ತೋರಿಸಿರುವ ಪ್ರಮಾಣ ವಚನಗಳನ್ನು ಪೂರ್ಣವಾಗಿ ಬರೆದು ಮುದ್ರಿಸಿ, ಆಕರವನ್ನು ಕೊಟ್ಟು, ಅರ್ಥವನ್ನೂ ಬರೆದಿರುವುದು ಓದುಗರಿಗೆ ಬಹಳ ಉಪಕಾರವಾಗಿದೆ. ಪ್ರತಿ ಅಧಿಕಾರದಲ್ಲಿಯೂ ವಿಷಯಗಳನ್ನು ವಿಂಗಡಿಸಿ, ಶೀರ್ಷಿಕೆಯನ್ನು ಕೊಟ್ಟು, ಸಂಗತಿಗಳನ್ನು ಬರೆದಿರುವುದೂ ಬಹಳ ಸಮರ್ಪಕವಾಗಿದೆ. ಇವರು ಸಂಸ್ಕೃತ ದ್ರಾವಿಡಾತ್ಮಕ ಉಭಯ ಭಾಷೆಗಳಲ್ಲೂ ಚನ್ನಾಗಿ ಪರಿಚಯ ಹೊಂದಿ ಉಭಯ ವೇದಾಂತಗಳಲ್ಲಿ ನಿಷ್ಣಾತರು. ಇವರು ಕೇಂದ್ರ ಸರ್ಕಾರದಲ್ಲಿ ಉನ್ನತ ಉದ್ಯೋಗದಲ್ಲಿದ್ದು ನಿವೃತ್ತರಾದವರು. ಹಿಂದೆ ಪ್ರಖ್ಯಾತರಾಗಿ, ನಮ್ಮ ಆಚಾರ್ಯವರ್ಯರಾದ ಶ್ರೀಮದಭಿನವ ರಂಗನಾಥ ಬ್ರಹ್ಮ ತಂತ್ರ ಸ್ವತಂತ್ರ ಪರಕಾಲ ಸ್ವಾಮಿಗಳವರ ಕೃಪಾಕಟಾಕ್ಷಕ್ಕೆ ಪರಿಪೂರ್ಣ ಪಾತ್ರರಾದವರು ಶ್ರೀ ಸನ್ನಿಧಿಯಲ್ಲಿ ಹತ್ತಾರು ವರ್ಷಗಳ ಕಾಲ ವೇದ ಪ್ರಬಂಧಗಳನ್ನು ಅಧ್ಯಯನ ಮಾಡಿರುತ್ತಾರೆ. ಸ್ವಾಚಾರ್ಯರಲ್ಲಿ ಸಾಂಪ್ರದಾಯಿಕ ಗ್ರಂಥಗಳನ್ನೂ ಉಪಯುಕ್ತ ಭಾಗಗಳನ್ನೂ ಅಧಿಕರಿಸಿ, "ಬಹುಭ್ಯಃ ಶ್ರೋತವ್ಯಂ ಬಹುಧಾಶ್ರೋತವ್ಯಂ" ಎಂಬಂತೆ ಶ್ರೀ ಶ್ರೀ ಸ್ವಾಮಿಗಳಲ್ಲೂ ಇನ್ನೂ ಅನೇಕ ವೇದಾಂತ ವಿದ್ವಾಂಸರುಗಳ ಹತ್ತಿರವೂ ಆಗಾಗ್ಯೆ ವೇದಾಂತ ವಿಚಾರ ಮಾಡಿ ಸಂಶಯಗಳನ್ನು ನಿವರ್ತಿಸಿಕೊಂಡು, ಅನವರತ ಪರಿಶ್ರಮಪಟ್ಟು ವೇದಾಂತ ಜ್ಞಾನ ನಿಷ್ಣಾತರಾಗಿ ಈ ಗ್ರಂಥ ರತ್ನವನ್ನು ಸವ್ಯಾಖ್ಯಾನ ಪ್ರಕಾಶ ಪಡಿಸಿರುತ್ತಾರೆ. ಈ ಗ್ರಂಥ ರತ್ನವು ಸಕಲ ಸಂಪ್ರದಾಯಾರ್ಥಗಳನ್ನೂ ಒಳಗೊಂಡಿದೆ. ಸರ್ವರಿಗೂ ಉಪಾದೇಯ. ಆಸ್ತಿಕರೆಲ್ಲರೂ ಸಂಕೇತ ಪಿಶಾಚಿಕೆಯನ್ನು ದೂರತಳ್ಳಿ, ಆಯಾಯಾ ಪ್ರದೇಶಗಳಲ್ಲಿರುವ ಸಮರ್ಥಜ್ಞಾನಿಗಳಲ್ಲಿ ಮೂಲ ಗ್ರಂಥವನ್ನು ಕಾಲ

ಕ್ಷೇಪ ಮಾಡಿ ಅನಂತರ ಈ ವ್ಯಾಖ್ಯಾನ ಗ್ರಂಥವನ್ನು ಓದಿ ವಿಶದವಾದ ಜ್ಞಾನವನ್ನು ಹೊಂದಿ ಪರಮ ಪುರುಷಾರ್ಥ ಸಾಧನವಾದ ಶರಣಾಗತಿಯನ್ನು ಅನುಷ್ಠಿಸಿ, ತದ್ದ್ವಾರಾ ಶಾಶ್ವತವಾದ ಸುಖವನ್ನು ಪಡೆಯಲಿ ಎಂದು ನಾವು ಸರ್ವಜ್ಞ ಸರ್ವಶಕ್ತ ಪರಮಕಾರುಣಿಕನಾದ ಶ್ರೀ ಲಕ್ಷ್ಮೀಹಯಗ್ರೀವನನ್ನು ಪ್ರಾರ್ಥಿಸುತ್ತೇವೆ. ಹಾಗೆಯೇ ಈ ಗ್ರಂಥ ಕರ್ತರು ಶ್ರೀ ಮನ್ನಿಗಮಾಂತ ಮಹಾದೇಶಿಕನ್‌ರವರು ಅನುಗ್ರಹಿಸಿರುವ ಚಿಲ್ಲರೈ ರಹಸ್ಯ ಗ್ರಂಥಗಳೇ ಆದಿಯಾಗಿ ಇತರ ಸಂಪ್ರದಾಯ ಗ್ರಂಥಗಳನ್ನೂ ಪ್ರಚುರಪಡಿಸಿ ನಮ್ಮ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಸರ್ವತೋಮುಖ ವಾಗಿ ಹರಡಲಿ ಎಂದು ಆಶಿಸುತ್ತೇವೆ.

ಇತಿ **ನಾರಾಯಣ ಸ್ಮೃತಯಃ**

ಶ್ರೀ ಶ್ರೀ ಪರಕಾಲ ಸ್ವಾಮಿಗಳ ನಿಯಮಾನುಸಾರಿ ವ್ಯಾಕರಣ
**ವೇದಾಂತ ವಿದ್ವಾನ್ ವಿದ್ವನ್ಮಣಿ, ಆಸ್ಥಾನ ವಿದ್ವಾನ್**
ಸರಗೂರು **ಶ್ರೀನಿವಾಸ ವರದಾಚಾರ್ಯಃ**

ಶ್ರೀ

ಶ್ರೀಮತೇ ಲಕ್ಷ್ಮೀನೃಸಿಂಹ ಪರಬ್ರಹ್ಮಣೇ ನಮಃ

ಶ್ರೀಮತೇ ಶಠಗೋಪಾಯ ನಮಃ ।

ಶ್ರೀಮತೇ ರಾಮಾನುಜಾಯ ನಮಃ ।

ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ ।

ಶ್ರೀಮದಾದಿವಣ್ ಶಠಗೋಪ ಯತೀಂದ್ರ ಮಹಾದೇಶಿಕಾಯ ನಮಃ ।

★

ಶ್ರೀಮದಹೋಬಿಲ ಮಠದ ಆಸ್ಥಾನದಲ್ಲಿ 44ನೇ ಪಟ್ಟದಲ್ಲಿ ಮೂರ್ಧಾಭಿಷಿಕ್ತರಾಗಿ ಜಿಜಯ ಮಾಡಿಸಿರುವ ಶ್ರೀ ಲಕ್ಷ್ಮೀನೃಸಿಂಹ ದಿವ್ಯ ಪಾದುಕಾ ಸೇವಕ, ಶ್ರೀ ಮತ್ಪರಮಹಂಸ ಶ್ರೀ. ಉಭ. ವೇ., **ವೇದಾಂತದೇಶಿಕ ಯತೀಂದ್ರ** ಮಹಾದೇಶಿಕನ್‌ರವರು ಅನುಗ್ರಹಿಸಿದ ಮಂಗಳಾಶಾಸನ ಶ್ರೀಮುಖ.

## ಮಂಗಳಾಶಾಸನ ಶ್ರೀಮುಖಮ್

ಶ್ರಿಯಃ ಪತಿಯ ನ ಸರ್ವೇಶ್ವರನ್ ಇವ್ವುಲಹಿನಿಲ್ ಪಿರಂದಿರುಕ್ಕುಮ್ ಸಕಲ ಜೀವರಾಶಿಹಳುಮ್ ಮೋಕ್ಷ ಮಡೈಯ ವೇಂಡುಮೆನ್ರು ಪಾಡುಪಟ್ಟುವರುಹಿರಾನ್. ಅದರ್ಕಾಹ ಸೃಷ್ಟಿಕಾಲತ್ತಿಲ್ ಸಕಲ ಜೀವರ್‌ಹಳುಕ್ಕುಂ ಶರೀರೇಂದ್ರಿಯಂಗಳೈಕ್ಕೊಡುತ್ತು, ಚತುರ್ಮುಖ ಬ್ರಹ್ಮದೇವನ್ ಮೂಲಮಾಹವುಮ್, ತಾನೇ ರಾಮಕೃಷ್ಣಾದ್ಯವ ತಾರಂಗಳೈಪ್ಪಣ್ಣಿಯುಮ್, ಆಳ್ವಾರ್‌ಹಳ್ ರೂಪ ಮಾಹ ಅಭಿನವ ದಶಾವತಾರಂ ಪಣ್ಣಿಯುಮ್, ಶ್ರೀಮನ್ನಾಥ ಯಾಮುನ ರಾಮಾನುಜ ವೇದಾಂತ ದೇಶಿಕ ಪ್ರಭೃತಿ ಆಚಾರ್ಯರ್‌ಹಳ್ ಮೂಲ ಮಾಹ ಅವತರಿತ್ತುಂ, ಜ್ಞಾನೋಪದೇಶಂ ಪಣ್ಣಿ ಉಪಕರಿತ್ತಿರುಕ್ಕಿರಾನ್ ಇಂದ ಜ್ಞಾನ ದೀಪತ್ತೈಕ್ಕೊಂಡು ಎಲ್ಲೋರುಮ್ ಸಂಸಾರ ಮಾಹಿರ ಇರುಟ್ಟೈಪ್ಪೋಕ್ಕಡಿತ್ತು ಉಜ್ಜೀವನಂ ಪೆರವೇಂಡಿಯದೆನ್ಬದು ಅವನುಡೈಯ ತಿರುವುಳ್ಳಮ್.

ಪ್ರಕೃತಂ, ಶ್ರೀಮನ್ನಿಗಮಾಂತ ಮಹಾದೇಶಿಕನ್ ಇಂದ ಕಲಿಯಿಲ್ ಅವತರಿತ್ತು, ಪರಶ್ಶತಂಗಳಾನ ಗ್ರಂಥ ಗಳೈ ಸಂಸ್ಕೃತ ದ್ರಾವಿಡ ಭಾಷೈಗಳಿಲ್ ಅನುಗ್ರಹಿತ್ತಿರುಕ್ಕಿರಾರ್. ಅವೈಹಳಿಲ್ **ಶ್ರೀಮದ್ರಹಸ್ಯತ್ರಯಸಾರಂ** ಸಕಲ ವೇದಾಂತಾರ್ಥಂಗಳುಮ್ ಅಡಂಗಿಯಿರುಕ್ಕಿರ ಪ್ರಧಾನಮಾನ ಸಂಪ್ರದಾಯ ಗ್ರಂಥಮ್. ಇಕ್ಕಾಲತ್ತಿ ಲುಳ್ಳವರ್ ದೇಹಯಾತ್ರೈಕ್ಕಾಹವೇ ತಂಗಳ್ ಆಯುಸ್ಸು ಮುಳುವದೈಯುಮ್ ಶೆಲವಳಿತ್ತು ವರುಹಿರಾರ್ಹಳ್. ಇವರ್‌ಹಳ್ ಇಂದರಹಸ್ಯ ಗ್ರಂಥ ಮೊನ್ರೈಯಾವದು ಸದಾಚಾರ್ಯನಿಡಮ್ ಕಾಲಕ್ಷೇಪಮ್ ಪಣ್ಣಿ ಜ್ಞಾನಂ ಸಂಪಾದಿತ್ತುಕ್ಕೊಂಡು ಅವ್ವಾಚಾರ್ಯರ್‌ಹಳ್ ಮೂಲಮಾಹ ಎಂಬೆರುಮಾನ್ ತಿರುವಡಿಹಳಿಲ್ ಆತ್ಮರಕ್ಷಾಭರ ಸಮರ್ಪಣಮ್ ಶೆಯ್ದಾಲ್ ಆತ್ಮೋಜ್ಜೀವನಮ್ ಪೆರಲಾಮ್.

ವಿದ್ವಾನ್ ಸರಗೂರ್ ಮಾಡಪೂಶಿ ಕೃಷ್ಣಮಾಚಾರ್ಯರ್ ಸದಾಚಾರ್ಯರ್‌ಹಳಿಡಮ್ ಉಭಯ ವೇದಾಂತಂ ಗಳೈಯುಮ್ ನನ್ರಾಹ ಅಧಿಕರಿತ್ತವರ್. ಕರ್ಮಠರ್. ಇವರ್ ಏರ್ಕನವೇ ಷೋಡಶ ಕರ್ಮಾನುಷ್ಠಾನಗ್ರಂಥಂ ಗಳಾನ ಪೂರ್ವಾಪರ ಪ್ರಯೋಗಂಗಳೈಯುಮ್, ಶ್ರೀ ವೈಷ್ಣವರ್‌ಹಳ್ ಶೆಯ್ಯವೇಂಡಿಯ ಸ್ನಾನ ಸಂಧ್ಯಾವಂದನ

ಜಪಾದಿ ಭಗವದಾರಾಧನ ಪರ್ಯಂತಗಳಾನ ನಿತ್ಯಕರ್ಮಂಗಳೈಯುಮ್ ಅಮಾವಾಸ್ಯಾದಿತರ್ಪಣಂಗಳೈಯುಮ್ ತೆರವಿಕ್ಕಿರ "ದಿನಚರಿ" ಗ್ರಂಥವೊನ್ರೈಯುಂ, ಪೂರ್ವರ್‌ಹಳ್ ಅನುಷ್ಠಿತ್ತು ವನ್ದಿರುಹಿರಮುರೈಯಿಲ್, ಪೂರ್ವಾಚಾರ್ಯರ ಗ್ರಂಥಗಳೈ ಆಧಾರಮಾಹವೈತ್ತುಕ್ಕೊಂಡು ಪ್ರಕಾಶಪ್ಪಡುತ್ತಿಯಿರುಕ್ಕಿರಾರ್ ಇಪ್ಪೊೞುದು ಶ್ರೀ ಮದ್ರಹಸ್ಯತ್ರಯಸಾರತ್ತುಕ್ಕು ಎಳಿಯ ಕನ್ನಡ ಭಾಷೈಯಿಲ್ ಒರು ವ್ಯಾಖ್ಯಾನತ್ತೈ ಪೂರ್ವಾಚಾರ್ಯ ಗ್ರಂಥಗಳೈ ಅಡಿಯೊಟ್ರಿ ಎೞುದಿ, ಮೂಲ ಶ್ರೀ ಸೂಕ್ತಿಯುಡನ್ ಕನ್ನಡ ಲಿಪಿಯಿಲ್ ಅಚ್ಚಿಟ್ಟಿರುಕ್ಕಿರದು ಕನ್ನಡ ದೇಶತ್ತಾರ್ಕು ಮಿಹವುಮ್ ಉಪಯೋಗ ಮಾಯಿರುಕ್ಕುಮ್ "ಕರ್ಮಸಮುಚ್ಚಿತಾತ್ ಜ್ಞಾನಾತ್ ಅಪವರ್ಗಶ್ರುತೇಃ" ಎನ್ರು ಕರ್ಮಾನುಷ್ಠಾನ ಮೂಲಮಾನ ಜ್ಞಾನಮ್ ಮೋಕ್ಷತ್ತಿರ್ಕು ಕಾರಣಮ್ ಎನ್ಹಿರ ಸಿದ್ಧಾಂತತ್ತೈ ಅಡಿಯೊಟ್ರಿ ಎಲ್ಲೋರುಂ ಮೋಕ್ಷಂ ಪೆರ ಇಗ್ರಂಥಂಗಳ್ ಮಿಹವುಂ ಪಯನ್‌ಪಡುಮ್, ಎನ್ರು ಸಂತೋಷಪ್ಪಡುಹಿರೋಮ್.

ಆಸ್ತಿಕರ್‌ಹಳ್ ಅನೈವರುಂ ಇಂದ "ರಹಸ್ಯತ್ರಯಸಾರ" ಶ್ರೀ ಕೋಶತ್ತೈ ವಿಲೈಕೊಡುತ್ತು ವಾಂಗಿಕ್ಕೊಂಡು, ಸದಾಚಾರ್ಯರ್ ಹಳಿಡತ್ತಿಲ್ ಕಾಲಕ್ಷೇಪಂ ಶೆಯ್ದು ನಲ್ಲ ಜ್ಞಾನತ್ತೈ ಅಡೈಂದು ಭಗವಾನ್ ತಿರುವಡಿಹಳಿಲ್ ಆತ್ಮರಕ್ಷಾಭರತ್ತೈ ಸಮರ್ಪಿತ್ತು ಕೃತ ಕೃತ್ಯರ್‌ಹಳಾಹವುಮ್, ಕೃತಾರ್ಥರ್‌ಹಳಾಹವುಮ್, ವೇಂಡಿ ಆಶಾಸಿಕ್ಕಿರೋಮ್. ಇಪ್ಪಡಿಯೇ ಶ್ರೀಮಾನ್ ಸೆರಗೂರ್ ಕೃಷ್ಣಮಾಚಾರ್ಯರ್ ಶ್ರೀ ದೇಶಿಕರುಡೈಯ ಮಟ್ರೈಯ ಚಿಲ್ಲರೈ ರಹಸ್ಯ ಗ್ರಂಥಂಗಳೈಯುಮ್ ವೆಳಿಪ್ಪಡುತ್ತಿ ಉಲಹತ್ತೈ ವಾೞ್ವಿಕ್ಕುಂಪಡಿ ಶ್ರೀ ಲಕ್ಷ್ಮೀನೃಸಿಂಹನ್ ಅನುಗ್ರಹಿಕ್ಕವೇಂಡುಮೆನ್ರು ಅಪ್ಪೆಂಬೆರುಮಾನೈ ಪ್ರಾರ್ಥಿತ್ತು ಶೆಯ್ದ ಮಂಗಳಾಶಾಸನಮ್.

ಶ್ರೀ ಶಠಗೋಪಶ್ರೀಃ

ಶುಕ್ಲ ಸಂ. ಮಾಶಿಮಾದಮ್
ಶಭಿಷೆತ್ತೈ
25-2-1990

VEDANTA VIDWAN

Dr N S Anantharangachar, Ph.D,
Principal, Maharaja's Sanskrit College, Mysore (Retd)
Member, Academy of Sanskrit Research, Melkote
Hon Registrar Bharatiya Vidya Bhawan, Bangalore

SRINIKETAN
780 V Main Road
Hosahally
BANGALORE-40

**ಶ್ರೀಮತೇ ರಾಮಾನುಜಾಯ ನಮಃ**

# ಗ್ರಂಥ ಪರಿಚಯ – ಆಶಾಸನೆ

"ಕವಿತಾರ್ಕಿಕ ಸಿಂಹರು", "ಸರ್ವತಂತ್ರ ಸ್ವತಂತ್ರರು, ವೇದಾಂತದೇಶಿಕರು" ಎಂಬ ಶ್ರೀನಾಮಗಳಿಗೆ ಅನ್ವರ್ಥಪಾತ್ರರಾದ ಶ್ರೀಮದ್ವೇಂಕಟನಾಥರು ಅನುಗ್ರಹಿಸಿದ ಶತಾಧಿಕ ಗ್ರಂಥ ರತ್ನಗಳಲ್ಲಿ **'ಶ್ರೀಮದ್ರಹಸ ತ್ರಯಸಾರ'ಕ್ಕೆ** ವಿಶಿಷ್ಟವಾದ ಸ್ಥಾನವಿದೆ ಇದು ಇವರ ಪರಿಣತವತ್ಸರದ ಫಲವಾಗಿ ಶ್ರೀ ವೈಷ್ಣವ ಸಿದ್ಧಾಂತದ ಸಾರಸರ್ವಸ್ವವನ್ನೂ ಒಳಗೊಂಡಿದೆ ಮುಮುಕ್ಷುವಾದವನೊಬ್ಬನು ಅವಶ್ಯವಾಗಿ ಅರಿಯಬೇಕಾದ ತತ್ತ್ವ–ಹಿತ–ಪುರುಷಾರ್ಥ ಸ್ವರೂಪವನ್ನೆಲ್ಲಾ ಲಲಿತವಾದ ಮತ್ತು ಮಂಜುಳವಾದ ಶೈಲಿಯಲ್ಲಿ ತಿಳಿಯಪಡಿಸುವ ಮೇರು ಕೃತಿಯಾಗಿದೆ ಇದು ಇದರ ವೈಶಿಷ್ಟ್ಯ ಹೀಗಿದೆ –

೧) ಪ್ರಪತ್ತಿಯು ಸ್ವತಂತ್ರವೂ ಸಮರ್ಥವೂ ಆದ ಮೋಕ್ಷೋಪಾಯವೆಂಬುದನ್ನು ಈ ಕೃತಿ ಸಿದ್ಧಾಂತಿಸುತ್ತದೆ.

೨) ಮೂಲಮಂತ್ರ, ದ್ವಯಮಂತ್ರ ಮತ್ತು ಚರಮಶ್ಲೋಕಗಳು ಈ ಪ್ರಪತ್ತಿ ಸಿದ್ಧಾಂತವನ್ನು ಪ್ರಕಾಶಪಡಿಸುವ ರಹಸ್ಯಗಳೆಂದು ಚೆನ್ನಾಗಿ ತೋರಿಸಿ ಕೊಡಲಾಗಿದೆ.

೩) ಜನಸಾಮಾನ್ಯರಿಗೆ ಅರ್ಥವಾಗುವಂತೆ ಸಂಸ್ಕೃತ ಮತ್ತು ತಮಿಳಿನ ಹಿತಮಿತ ವಾದ ಮಿಶ್ರಣವನ್ನು ಹೊಂದಿರುವ 'ಮಣಿ ಪ್ರವಾಳ ಶೈಲಿ'ಯಲ್ಲಿ ಇದು ರಚಿತವಾಗಿದೆ.

೪) ಇಲ್ಲಿ ಪ್ರತಿಪಾದಿಸಿರುವ ಸಿದ್ಧಾಂತಗಳಿಗೆ ಸ್ಮೃತೀತಿ ಹಾಸ ಪುರಾಣಗಳ ಪ್ರಮಾಣಗಳನ್ನೂ ಆಳ್ವಾರರುಗಳ ಶ್ರೀ ಸೂಕ್ತಿಗಳ ಪ್ರಮಾಣಗಳನ್ನೂ ಅನೇಕಶಃ ಉಲ್ಲೇಖಿಸಿದೆ ಉಭಯ ವೇದಾಂತಗಳ ಆಧಾರವಿರುವುದನ್ನು ಪ್ರಮಾಣೀಕರಿಸಲಾಗಿದೆ.

೫) ಪ್ರಸ್ಥಾನತ್ರಯ ಭಾಷ್ಯಗಳಂತೆ ಅಲ್ಲದೆ ಇದನ್ನು ಅಧಿಕರಿಸುವುದರಲ್ಲಿ ಸರ್ವರಿಗೂ ಅಧಿಕಾರವಿದೆ

೬) ಪ್ರಪತ್ತಿ ಸ್ವರೂಪ, ಪ್ರಪತ್ತಿಯ ಪ್ರಕಾರಗಳು, ಪ್ರಪತ್ತಿಯ ಪರಿಕರಗಳು ಪ್ರಪತ್ತ್ಯನುಷ್ಠಾನ ಕ್ರಮ, ಪ್ರಪನ್ನನ ಲಕ್ಷಣಗಳು, ಪ್ರಪನ್ನನ ಉತ್ತರಕೃತ್ಯ ಸ್ವರೂಪ – ಇವುಗಳನ್ನೆಲ್ಲಾ ಕುರಿತು ನಿಷ್ಕೃಷ್ಟವಾದ ನಿರೂಪಣೆ ಇಲ್ಲಿದೆ

೭) ಪ್ರಪತ್ತಿ ಸಿದ್ಧಾಂತದ ಬಗೆಗೆ ಭಗವದ್ರಾಮಾನುಜರ ಕಾಲದಿಂದ ತಮ್ಮ ಕಾಲದವರೆಗೆ ಬೆಳೆದಿದ್ದ ಬಹು ಮುಖ್ಯವಾದ ಅಭಿಪ್ರಾಯಗಳನ್ನೆಲ್ಲಾ ಪರಿಶೀಲಿಸಿ 'ಇದಮಿತ್ಥಂ' ಎಂದು ಶಾಸ್ತ್ರಮರ್ಯಾದೆ ಮತ್ತು ಸಂಪ್ರದಾಯಗಳಿಗನುಸಾರವಾಗಿಯೂ ಪ್ರಮಾಣ ಪೂರ್ವಕವಾಗಿಯೂ ನಿಷ್ಕರ್ಷಿಸಿ ಪ್ರತಿಪಾದಿಸಿರುವುದು ಇದರ ಮಹತ್ವವಾಗಿದೆ ಆಚಾರ್ಯರು ಈ ಕೃತಿಯನ್ನು ರಚಿಸದೆ ಹೋಗಿದ್ದರೆ, ಪ್ರಪತ್ತಿಯನ್ನು ಕುರಿತಂತೆ ಅನೇಕ ವಿಚಾರಗಳು ಸಂದಿಗ್ಧವಾಗಿಯೇ ಉಳಿದು ಹೋಗುತ್ತಿದ್ದವು

ಈ ಮಹತ್ಕೃತಿಯ ಅಧ್ಯಯನ ಮತ್ತು ಅರ್ಥಾನುಸಂಧಾನ ಎಲ್ಲ ಧಾರ್ಮಿಕರಿಗೂ ಅದರಲ್ಲಿಯೂ ವಿಶೇಷವಾಗಿ ಶ್ರೀ ವೈಷ್ಣವರಿಗೆ ಅತ್ಯಾವಶ್ಯಕವೆಂದು ಮನಗಂಡ ಸನ್ಮಾನ್ಯ ಶ್ರೀ ಸರಗೂರು ಮಾಡಪೂಶಿ ಕೃಷ್ಣಮಾಚಾರ್ಯರು 'ಸಾರಚಂದ್ರಿಕಾ' ಎಂಬ ಕನ್ನಡ ವ್ಯಾಖ್ಯಾನದೊಡನೆ ಈ ಕೃತಿಯನ್ನು ಪ್ರಕಾಶ ಪಡಿಸುತ್ತಿರುವುದು ಕನ್ನಡಿಗರೆಲ್ಲರಿಗೂ ಪರಮೋಪಕಾರಕವಾಗಿದೆ ಈ ಕೃತಿಯಲ್ಲಿ ಶ್ರೀ ಮದ್ರಹಸ್ಯತ್ರಯಸಾರದ ಮೂಲಪಾಠವನ್ನು ಉಪಯುಕ್ತವಾದ ಶೀರ್ಷಿಕೆಗಳಡಿಯಲ್ಲಿ ಕೊಟ್ಟು ಅದರ ಅನುವಾದವನ್ನೊಳಗೊಂಡ ವಿವರಣೆಗಳನ್ನು ಎಲ್ಲರಿಗೂ ಅರ್ಥವಾಗುವ ಶೈಲಿಯಲ್ಲಿ ಕೊಟ್ಟಿದ್ದಾರೆ. ಮೂಲದಲ್ಲಿ ಆಚಾರ್ಯರು ಉಲ್ಲೇಖಿಸಿರುವ ಪ್ರಮಾಣಗಳ ಆಕರವನ್ನು ಅಡಿ ಟಿಪ್ಪಣಿಯಲ್ಲಿ ಕೊಟ್ಟಿರುವುದಲ್ಲದೆ ಅವುಗಳ ಪೂರ್ಣಪಾಠವನ್ನೂ ಕೊಟ್ಟು ಅರ್ಥವಿವರಣೆ ಮಾಡಿರುವುದು ಬಹಳ ಉಪಯುಕ್ತವಾಗಿದೆ ಅನೇಕ ಉಪಯುಕ್ತವಾದ ವಿಷಯಗಳನ್ನು ವಿವರಣೆಯಲ್ಲಿ ವಿವೇಚಿಸಿರುವುದು ಆ ಬಗೆಗೆ ಹೆಚ್ಚಿನ ಅರಿವನ್ನು ಉಂಟು ಮಾಡಿ ಕೊಡುವುದಾಗಿವೆ. ಮಾನ್ಯ ಲೇಖಕರು ಈ ವ್ಯಾಖ್ಯಾನವನ್ನು ಸಿದ್ಧಪಡಿಸುವಲ್ಲಿ ಪರಮಪೂಜ್ಯರಾದ ಶ್ರೀ ಇಂಜಮೇಡು ಅಳಹಿಯಶಿಂಗರ್ ಅವರ ವ್ಯಾಖ್ಯಾನವನ್ನೂ ಶ್ರೀ ಕರೂರ್ ಸ್ವಾಮಿಗಳ ವ್ಯಾಖ್ಯಾನವನ್ನೂ ಮುಖ್ಯವಾಗಿ ಆಧಾರವನ್ನಾಗಿಟ್ಟುಕೊಂಡಿದ್ದಾರೆ ಶ್ರೀಮದ್ರಹಸ್ಯತ್ರಯಸಾರದ ಮೇಲಿನ ಪಂಚವ್ಯಾಖ್ಯಾನಗಳನ್ನು ಪರಿಶಿಲಿಸಿದ್ದಾರೆ ಇಂಥ ಒಂದು ಗ್ರಂಥದ ಪ್ರಕಟಣೆ ಬಹಳ ಆವಶ್ಯಕವಾಗಿತ್ತು. ಇದುವರೆಗೆ ಕನ್ನಡದಲ್ಲಿ ಪ್ರಕಟವಾದ ರಹಸ್ಯತ್ರಯಸಾರವನ್ನು ಕುರಿತ ಕೃತಿಗಳು ಬಹಳ ವಿಸ್ತಾರವಾಗಿ ಅಥವಾ ಬಹಳ ಸಂಗ್ರಹವಾಗಿ ಅಥವಾ ಮೂಲಪಾಠ ರಹಿತವಾಗಿ ಇರುವುದರಿಂದ ಈ ಕೃತಿ ಅತ್ಯಂತ ಉಪಯುಕ್ತವಾಗಿರುವುದರಲ್ಲಿ ಸಂಶಯವಿಲ್ಲ.

'ಸಾರಚಂದ್ರಿಕಾ' ವ್ಯಾಖ್ಯಾನವನ್ನು ರಚಿಸಿರುವ ಶ್ರೀ ಕೃಷ್ಣಮಾಚಾರ್ಯರು ಗುರು ಮುಖೇನ ಉಭಯ ವೇದಾಂತಗಳನ್ನೂ ಅಧಿಕರಿಸಿ ಅವುಗಳಲ್ಲಿ ಪ್ರಭುತ್ವವನ್ನು ಪಡೆದಿರುವ ಘನವಿದ್ವಾಂಸರಾಗಿದ್ದಾರೆ ವೇದಾಂತಾರ್ಥ ವಿಚಾರವನ್ನೇ ಅನವರತ ಮಾಡುವವರಾಗಿದ್ದಾರೆ ಶ್ರೀವೈಷ್ಣವ ಸಭೆಯ ಸಂಸ್ಥಾಪಕರಾಗಿ ಬಹು ಮುಖ್ಯವಾಗಿ ಸಮಾಜ ಸೇವೆಯನ್ನು ಸಲ್ಲಿಸುತ್ತಿರುವರಲ್ಲದೆ ಶ್ರೀ ಲಕ್ಷ್ಮೀನೃಸಿಂಹ ಸ್ವಾಮಿಯ ಕೈಂಕರ್ಯವನ್ನು ಅನವರತ ಮಾಡುವ ಪರಮ ಭಾಗ್ಯವನ್ನು ಹೊಂದಿದ್ದಾರೆ ಅನುಷ್ಠಾನ ತತ್ಪರರೂ ಶ್ರೀ ವೈಷ್ಣವ ಸಂಪ್ರದಾಯ ಭೂಷಣರೂ ಆಗಿರುವ ಮಾನ್ಯರು ಸಾರತಮವಾದ ಈ ಕೃತಿಯನ್ನು ರಚಿಸಿ ಪರಮೋಪಕಾರ ಮಾಡಿದ್ದಾರೆ. ಆಸ್ತಿಕರಾದ ಕನ್ನಡಿಗರೆಲ್ಲರೂ ಅಮೂಲ್ಯವಾದ ಈ ಕೃತಿಯನ್ನು ಅಧ್ಯಯನ ಮಾಡಿ ಜೀವನ ಸಾಫಲ್ಯವನ್ನು ಪಡೆದು ಕೊಳ್ಳುವಂತಾಗಲೆಂದು ನಾನು ಆಶಿಸುತ್ತೇನೆ.

**ಎಂ. ಎಸ್. ಅನಂತರಂಗಾಚಾರ್ಯ**

16-1-1990

॥ ಶ್ರೀಮತೇ ರಾಮಾನುಜಾಯ ನಮಃ ॥

॥ ಶ್ರೀಮನ್ನಿಗಮಾನ್ತ ಮಹಾದೇಶಿಕಾಯ ನಮಃ ॥

॥ ಶ್ರೀಮತೇ ಶ್ರೀವಣ್ಶಠಕೋಪ ಶ್ರೀವೇದಾನ್ತ ದೇಶಿಕಾಯತೀಂದ್ರ ಮಹಾದೇಶಿಕಾಯ ನಮಃ ॥

★

# ಗ್ರಂಥಾವಲೋಕನ

ಶ್ರೀಮದ್ವೇದಾನ್ತದೇಶಿಕರೆಂದೇ ಜಗದ್ವಿಖ್ಯಾತರಾದ ಶ್ರೀವೇಂಕಟನಾಥಾಚಾರ್ಯರ ಗುರುಗಳ ಶ್ರೀಮದ್ರಹಸ್ಯತ್ರಯ ಸಾರವು ಶ್ರೀ ವೈಷ್ಣವ ಪ್ರಸ್ಥಾನ ಗ್ರಂಥಗಳಲ್ಲಿ ಅಗ್ರಮಾನ್ಯತೆ ಪಡೆದ ಗ್ರಂಥರತ್ನವಾಗಿದ್ದು, ಮುಮುಕ್ಷುವು ಅವಶ್ಯವಾಗಿ ಅನುಸಂಧಿಸಿ ಅರ್ಥವರಿಯಬೇಕಾದ ನಾಲ್ಕು ದಿವ್ಯಗ್ರಂಥಗಳಲ್ಲಿ ಒಂದಾಗಿದೆ. ಗುರುಮುಖೇನ ಇದನ್ನು ಕಾಲಕ್ಷೇಪ ಕ್ರಮದಲ್ಲಿ ಕೇಳಿ, ತತ್ತ್ವ, ಹಿತ, ಪುರುಷಾರ್ಥಗಳನ್ನರಿತು, ಪ್ರಪನ್ನನು ತನ್ನ ಜೀವನವನ್ನು ಭಗವದ್ಭಾಗವತ ಕೈಂಕರ್ಯದಲ್ಲಿ ಸವೆಸಬೇಕಾದ ಅವಶ್ಯಕತೆಯೂ ಸಂಪ್ರದಾಯದಲ್ಲಿ ಬಂದಿದೆ ಶ್ರೀ ಮದ್ರಾಮಾನುಜಾಚಾರ್ಯರು ಬ್ರಹ್ಮಸೂತ್ರಗಳಿಗೆ ಬೋಧಾಯನ ವೃತ್ತ್ಯನುಸಾರಿಯಾಗಿಯೂ ಟಂಕದ್ರಮಿಡಾದಿ ಪೂರ್ವಾಚಾರ್ಯಾಭಿಪ್ರಾಯಾನುಗುಣವಾಗಿಯೂ ಶ್ರೀ ಭಾಷ್ಯವನ್ನು ಅನುಗ್ರಹಿಸಿ ಉಪಕರಿಸಿದಂತೆ, ಶ್ರೀ ವೇದಾನ್ತದೇಶಿಕರೂ, ಪರಂಪರೆಯಲ್ಲಿ ಕಿವಿಯಿಂದ ಕಿವಿಗೆ ಮಾತ್ರ ಹೋಗುತ್ತಾ, ಬರೆವಣಿಗೆಯಲ್ಲಿ ಬಾರದೇ ಉಳಿದಿದ್ದ ಮೂಲಮಂತ್ರ, ದ್ವಯಮಂತ್ರ, ಚರಮ ಶ್ಲೋಕಗಳೆಂಬ ಮೂರು "ರಹಸ್ಯ"ಗಳ ದಿವ್ಯಾರ್ಥ ಸಾಗರವನ್ನೆಲ್ಲಾ ಕ್ರೋಡೀಕರಿಸಿ, ವೇದ, ಶಾಸ್ತ್ರ, ಪಾಂಚರಾತ್ರ, ಇತಿಹಾಸ, ಪುರಾಣ, ಧರ್ಮಶಾಸ್ತ್ರಾದಿ ಸಕಲ ಪ್ರಮಾಣ ಪೂರ್ವಕವಾಗಿ ಜ್ಞೇಯಾರ್ಥಗಳನ್ನು ನಿರ್ಧರಿಸಿ, ಸಂಶಯ ವಿಪರ್ಯಯಾದಿಗಳಿಗೆ ಅವಕಾಶವಿಲ್ಲದಂತೆ, ಈ ಪ್ರಪತ್ತಿ ಶಾಸ್ತ್ರವನ್ನು ಈ ರೂಪದಲ್ಲಿ ಅನುಗ್ರಹಿಸಿರುವರು ಪ್ರಪತ್ತಿಯ ಸ್ವರೂಪ, ಅದರ ಅಂಗಗಳ ಸ್ವರೂಪ, ಪರಸ್ಪರ ಸಂಬಂಧ, ಪ್ರಪತ್ತಿಗೆ ಅಧಿಕಾರಿಯಾಗುವವನ ಯೋಗ್ಯತೆ, ಪ್ರಪತ್ತಿ – ಭಕ್ತಿಗಳ ಅಂತರ, ಪ್ರಪನ್ನನಿಗಿರಬೇಕಾದ ಜ್ಞಾತ ಸ್ವರೂಪ, ಪ್ರಪನ್ನನ ಅನುಷ್ಠಾನ ಪ್ರಕಾರ, ಕೈಂಕರ್ಯ ಸ್ವರೂಪ, ಮೂರು ರಹಸ್ಯ ಮಂತ್ರಗಳಲ್ಲಿ ಅಡಗಿರುವ ದಿವ್ಯ ಜ್ಞಾನ, ದಿವ್ಯ ಕ್ರಿಯಾದಿಗಳ ಸ್ವರೂಪ, ಹೀಗೆ ಅನೇಕ ವಿಷಯಗಳನ್ನೂ, ಒಟ್ಟಿನಲ್ಲಿ ಶ್ರೀಭಾಷ್ಯಕಾರರು ಗದ್ಯಗಳಲ್ಲೂ ಶ್ರೀ ಭಾಷ್ಯಾದಿ ಗ್ರಂಥಗಳಲೂ ವಿಶದೀಕರಿಸಿರುವ ಅರ್ಥಗಳನ್ನೂ, ಅಲ್ಲಲ್ಲಿ ಕೆಲವ ಸೂಚನೆಗಳಲ್ಲಿ ಮಾತ್ರ ಉಳಿಸಿಟ್ಟ ಅರ್ಥಗಳನ್ನೂ ಒಂದೆಡೆ ಸೇರಿಸಿ, ಬೆಳೆಸಿ, ಸಮನ್ವಯಿಸಿ, ವಿಶಿಷ್ಟಾದ್ವೈತ ಸಿದ್ಧಾಂತಕ್ಕೂ, ಶ್ರೀ ವೈಷ್ಣವ ಧರ್ಮಕ್ಕೂ ಮಹೋಪಕಾರ ಮಾಡಿ ರಾಮಾನುಜ ದರ್ಶನಕ್ಕೆ ಭದ್ರಕೋಟಿಯೊಂದನ್ನೇ ನಿರ್ಮಿಸಿದ್ದಾರೆ

•

ಶ್ರೀ ಮದ್ರಹಸ್ಯತ್ರಯಸಾರವು ಶ್ರೀ ದೇಶಿಕರು ಹೀಗೆ ಅನುಗ್ರಹಿಸಿದ ರಹಸ್ಯ ಗ್ರಂಥಗಳಲ್ಲಿ ಮುಖ್ಯವೂ, ಅತಿವಿಸ್ತೃತವೂ, ಅತಿ ಗಂಭೀರವೂ, ಸಮಗ್ರವೂ ಆದ ಕೃತಿ ಇದರ ಭಾಷೆ ಸಂಸ್ಕೃತ ಮಿಶ್ರವಾದ (ಭೂಯಿಷ್ಠವಾದ) ತಮಿಳು. ವಿದ್ವದ್ಗೋಷ್ಠಿಗಳಲ್ಲಿ ವಿಚಾರ ವಿನಿಮಯವು ಸಾಮಾನ್ಯವಾಗಿ ಇಂದೂ ನಡೆಯುತ್ತಿರುವ ಒಂದು ಸುಲಭ ಭಾಷೆ. ಇದನ್ನು ಮಣಿ ಪ್ರವಾಳವೆನ್ನುವರು. ಇದನ್ನು ಬರವಣಿಗೆಯಲ್ಲಿ ಮೊದಲು ಆರಂಭಿಸಿದವರು, ಶ್ರೀ ರಾಮಾನುಜ ಮಾತುಲರಾದ ಶ್ರೀ ಪೆರಿಯ ತಿರುಮಲೈನಂಬಿಗಳ ಕುಮಾರರೂ, ಶ್ರೀ ರಾಮಾನುಜ ಸಚ್ಛಿಷ್ಯಾಗ್ರೇಸರರೂ ಆದ ಶ್ರೀ ತಿರುಕ್ಕುರುಗೈ ಪ್ಪಿರಾನ್ ಪಿಳ್ಳಾನ್ ನಮ್ಮಾಳ್ವಾರರ

**ತಿರುವಾಯ್‌ಮೊಳಿಗೆ** ಪ್ರಥಮ ವ್ಯಾಖ್ಯಾನವಾದ ಶ್ರೀ ಆರಾಯಿರಪ್ಪಡಿಯು **ಈ** ಆಚಾರ್ಯರ ಕೈಯಲ್ಲಿ ಅವತರಿಸಿದ್ದಲ್ಲವೇ ಈ ಭೋಗ್ಯ ಭಾಷೆಯಲ್ಲಿ.

ಶ್ರೀ ಪಿಳ್ಳೈಲೋಕಾಚಾರ್ಯರ ಪರ್ಯಂತ ರಹಸ್ಯತ್ರಯಗಳಾದ, ಶ್ರೀ ಅಷ್ಟಾಕ್ಷರ ಮಂತ್ರ, ದ್ವಯಮಂತ್ರ, ಚರಮ ಶ್ಲೋಕಗಳ ಅರ್ಥಗಳು ಗ್ರಂಥಸ್ಥವಾಗಲಿಲ್ಲ ಗುರುಮುಖೇನ ಕೇಳಿದವರ ಪಾಲಿಗೆ ಮಾತ್ರ ದೊರೆಯುತ್ತಿದ್ದವು ಅಷ್ಟೆ. ಪುನಃ ಅರ್ಥಾನುಸಂಧಾನಕ್ಕೆ ಪ್ರಪನ್ನನು ನೆನಪನ್ನೇ ಮಾತ್ರ ಅವಲಂಬಿಸುತ್ತಿದ್ದ ಕಾಲ ಅದು ಇವರು ಅನುಗ್ರಹಿಸಿದ ಹದಿನೆಂಟು ರಹಸ್ಯಗ್ರಂಥಗಳು, ಆ ಹೊತ್ತಿಗಾಗಲೇ ಶ್ರೀ ಭಾಷ್ಯಕಾರರ ಶಿಷ್ಯ ಪ್ರಶಿಷ್ಯಾದಿ ಪರಂಪರೆಗಳಲ್ಲಿ ಹರಿದು ಬಂದು ಕಿವಿಯಲ್ಲಿ ಅಲ್ಲಲ್ಲಿ ಮೇಧಾವೀ ಆಚಾರ್ಯರ ಹೃದಯಗಳಲ್ಲಿ ಉಳಿದ ಅರ್ಥರಾಶಿಗಳ ಪೈಕಿ ಅರ್ಥ ಗ್ರಹಿಕೆಯ ಪ್ರಕಾರಗಳಲ್ಲಿ ಭಿನ್ನತೆಯು ಏರ್ಪಟ್ಟದ್ದು ಈ ಆಚಾರ್ಯರ ಕಿರಿಯ ಸಮಕಾಲೀನರಾಗಿದ್ದ ಶ್ರೀ ದೇಶಿಕರು ಈ ಅರ್ಥಭಿನ್ನತೆಗಳ ಸಾಮಂಜಸ್ಯ ಸಮನ್ವಯ ನಿರೂಪಣೆಯ ಮಹಾಕಾರ್ಯಕ್ಕೆ ಕೈ ಹಾಕುವ ಅವಶ್ಯವಾಯಿತು. ಯಾವ ಆಚಾರ್ಯರನ್ನೂ ಗೌರವಿಸಿಯೇ, ಯಾರ ಮನಸ್ಸನ್ನೂ ನೋಯಿಸದೆಯೇ, ಪರಮ ಸಾತ್ತ್ವಿಕವಾಗಿಯೇ, “ಅಭಿಯುಕ್ತರ” ಅರ್ಥರಾಶಿಯನ್ನು ಏಕ ಪ್ರಕಾರವನ್ನಾಗಿಸಿರುವ ಶ್ರೀ ದೇಶಿಕರ ಕಾರ್ಯ ಸ್ತುತ್ಯವೂ, ಅಪೂರ್ವವೂ, ವಿಸ್ಮಯಕಾರಕವೂ, ಅದ್ಭುತವೂ ಆಗಿದೆಯೆನ್ನಬೇಕು “ಶ್ರೀ ಭಾಷ್ಯಕಾರರ ಶಿಷ್ಯ ಸಂಪ್ರದಾಯಗಳಲ್ಲಿ ಎಲ್ಲೂ, ಅರ್ಥಭೇದವಿಲ್ಲ. ವಾಕ್ಯಯೋಜನಾಭೇದ ಮಾತ್ರವೇ ಇದೆ, ಎಂದು (**ಸಂಪ್ರದಾಯ ಪರಶುದ್ಧಿಯಲ್ಲಿ**) ಅನು ಗ್ರಹಿಸಿದ ಆಚಾರ್ಯರ ಹೃದಯ ವೈಶಾಲ್ಯವೂ ನಮ್ಮ ಇಂದಿನವರ ಮನಸ್ಸಿಗೆ ಬರಬೇಕಾಗಿದೆ. ಅತಿರೇಕದ, ವೈಭವವಾದಗಳ, ಅರ್ಥ ವೈಷಮ್ಯಗಳ, ಪ್ರಸ್ಥಾನಗಳ ಸ್ಥಾನಮಾನಗಳ ವೈಪರೀತ್ಯಗ್ರಹಿಕೆಗಳ ಏರುಪೇರುಗಳಲ್ಲಿ ಕಡಿವಾಣ ಹಾಕಿ, ಉಭಯ ವೇದಾಂತ ಸಾಮರಸ್ಯವನ್ನೂ ಮನೋಜ್ಞವಾಗುವಂತೆ, ಸಮತೋಲದ ಭಾಷೆಯಲ್ಲಿ ಸ್ಥಾಪಿಸಿ, ಶ್ರೀ ವೈಷ್ಣವರಿಗೆ ಪೂಜ್ಯವೂ ಗ್ರಾಹ್ಯವೂ ಆದ ಬಹು ಗ್ರಂಥಗಳ ಸಾರತಮ ಭಾಗಗಳನ್ನು ಅರ್ಥ ವಿಶೇಷಗಳನ್ನೂ ಒಗ್ಗೂಡಿಸಿ “ಪರಿಮಿತ ಗಂಭೀರ ಭಾಷಿ” ಎಂದೆನಿಸುವಂತೆ ರಚಿಸಿಕೊಟ್ಟು ಉಪಕರಿಸಿದ ಶ್ರೀ ದೇಶಿಕರಂಥಹ ಇನ್ನೊಬ್ಬ ಆಚಾರ್ಯರು ಇಲ್ಲವೆಂದೇ ಎನ್ನಬೇಕು. ಬ್ರಾಹ್ಮಣರು, ವರ್ಣಬಾಹಿರರು ಎಂಬ ಭೇದವಿಲ್ಲದಂತೆ, ಪಂಡಿತರು–ಪಾಮರರು ಅಂತರವಿಲ್ಲದಂತೆ, ಸಾತ್ತ್ವಿಕರೂ ಪ್ರಪನ್ನರೂ ಆದ ಎಲ್ಲರಿಗೂ ಅರ್ಥಗಳು ದೊರೆಯುವಂತೆ ಈ ಗ್ರಂಥವನ್ನನುಗ್ರಹಿಸಿದ ಹೃದಯ ವೈಶಾಲ್ಯವೂ (Catholicity) ನಮ್ಮ ಮನಸ್ಸಿಗೆ ಬರಬೇಕಾಗಿದೆ. ಶ್ರೀ ಭಾಷ್ಯವನ್ನು ಬಿಟ್ಟರೆ ಇದೇ ಶ್ರೀ ವೈಷ್ಣವರ ಎರಡನೆಯ ಮಹಾನಿಧಿಯೆಂದೂ, ಶ್ರೀ ಭಾಷ್ಯಾರ್ಥಗಳನ್ನು ಒಳಗೊಂಡಿರುವುದರಿಂದ ಅದಕ್ಕಿಂತಲೂ ಹೆಚ್ಚು ಪ್ರಿಯವೂ, ಭೋಗ್ಯವೂ, ಸುಲಭವೂ, ಪ್ರಪನ್ನ ಹೃದಯ ಸಮೀಪವೂ ಎಂದೂ ಹಿರಿಯರು ಶ್ರೀ ಮದ್ರಹಸ್ಯತ್ರಯಸಾರವನ್ನು ಗೌರವಿಸುವುದು ಇದರಿಂದಲೇ.

ಇಂಥ ಅಪೂರ್ವ ಗ್ರಂಥಕ್ಕೆ ಪ್ರಾಚೀನವಾದ ಪಂಚವ್ಯಾಖ್ಯಾನಗಳುಂಟು ಅವು **ಸಾರದೀಪಿಕೆ, ಸಾರಾಸ್ವಾದಿನೀ ಸಾರ ಪ್ರಕಾಶಿಕೆ, ಸಾರವಿವರಿಣೀ,** ಸಾರ **ಸಂಗ್ರಹಗಳೆಂಬವು** ಈ ಐದಲ್ಲದೆ, ಶ್ರೀ ಇಂಜಿಮೇಡು ಅಳಗಿಯಶಿಂಗರೆಂದು ಪ್ರಸಿದ್ಧರಾದ ಶ್ರೀವಣ್ ಶಠಕೋಪ ಶ್ರೀರಂಗಶಠಕೋಪ ಯತೀಂದ್ರ ಮಹಾದೇಶಿಕರು (ಶ್ರೀ ಅಹೋಬಿಲ ಮಠದ ೪೨ನೆಯ ಆಸ್ಥಾನ ಪತಿಗಳು) ಅನುಗ್ರಹಿಸಿದ **ಸಾರಬೋಧಿನಿಯೂ,** ಈಚೆಗೆ ಶ್ರೀ ಉಭ ವೇ ಉತ್ತಮೂರು ವೀರರಾಘವಾಚಾರ್ಯರು ಅನುಗ್ರಹಿಸಿದ **ಸಾರವಿಸ್ತಾರವೂ** ಸೇರಿ ಸಪ್ತ ವ್ಯಾಖ್ಯಾನಗಳು ಪ್ರಸಿದ್ಧವಿದ್ದರೂ ಇಂದು ಕೊನೆಯದೊಂದನ್ನು (ತಮಿಳು ಲಿಪಿಯಲ್ಲಿ) ಬಿಟ್ಟರೆ ಉಳಿದವಾವುವೂ ದೊರಕುವುದಿಲ್ಲ. ಪ್ರಾಚೀನ ಮುದ್ರಣದ ಈ ಕೋಶಗಳು ದೈವ ಕೃಪೆಯಿಂದ ದೊರೆತರೂ, ಕಾಲಕ್ಷೇಪ ಕ್ರಮದಲ್ಲಿ ಕೇಳಿ ಬಾರದವರಿಗೆ ಅವು ಪ್ರಯೋಜಕವೂ ಆಗುವಂತಿಲ್ಲ.

ಈ ಕೊರತೆಯನ್ನು ಕನ್ನಡ ನಾಡಿನ ಮಟ್ಟಿಗಾದರೂ ನೀಗಲು ಶ್ರೀ ಉ।ವೇ। ಸ. ಮಾ. ಕೃಷ್ಣಮಾಚಾರ್ಯ

ಸ್ವಾಮಿಗಳು ಮುಂದೆ ಬಂದು ಈ ಎಲ್ಲ ಪ್ರಕಟಿತ ಪ್ರಾಚೀನ ವ್ಯಾಖ್ಯಾನಗಳನ್ನೂ ಸಂಗ್ರಹಿಸಿ, ಈವರೆಗೆ ಪ್ರಕಟವಾಗದ ಶ್ರೀ ಕರೂರು ಸ್ವಾಮಿಗಳ **ಸಾರಾತಾತ್ಪರ್ಯ ಕೌಮುದೀಯನ್ನೂ** ಸೇರಿಸಿ, ಅತಿ ಸಂಗ್ರಹವೂ ಅತಿ ವಿಸ್ತಾರವೂ ಅಲ್ಲದ ಭೋಗ್ಯ ಶೈಲಿಯಲ್ಲಿ ಅರ್ಥಗಳನ್ನುನಾತಿರೇಕವಿಲ್ಲದಂತೆ, ಈಗ ಈ **ಸಾರಚಂದ್ರಿಕೆ**ಯೆಂಬ ವ್ಯಾಖ್ಯಾನವನ್ನು ರಚಿಸಿ ಪ್ರಕಟಿಸಿರುವುದು ಕನ್ನಡ ನಾಡಿನ ಶ್ರೀವೈಷ್ಣವರ ಭಾಗ್ಯವೆಂದು ಹೇಳಬೇಕಾಗಿದೆ.

ಶ್ರೀ ಕೃಷ್ಣಮಾಚಾರ್ಯ ಸ್ವಾಮಿಗಳ ಪರಿಚಯವಿಲ್ಲದ ಶ್ರೀ ವೈಷ್ಣವರು ಅತಿವಿರಳ. ಆಚಾರ್ಯ ಕೃಪಾಕಟಾಕ್ಷಕ್ಕೆ ಪೂರ್ಣಪಾತ್ರರಾದ ಈ ಮಹನೀಯರು ಈಗಾಗಲೇ ಶ್ರೀ ವೈಷ್ಣವ ಸಮಾಜಕ್ಕೂ ಆಸ್ತಿಕ ವರ್ಗಕ್ಕೂ ಮಾಡಿದ ಸೇವೆಗಳು ಅವಿಸ್ಮರಣೀಯ. ಬೆಂಗಳೂರಿನಲ್ಲಿ ಶ್ರೀ ಮಾಲೋಲನೃಸಿಂಹ ಮಂದಿರ ಸ್ಥಾಪನೆ, ನಿತ್ಯೋತ್ಸವಾದಿಗಳ ವ್ಯವಸ್ಥೆ, ಸರಗೂರೆಂಬ ತಮ್ಮ ಶ್ರೀ ಗ್ರಾಮದಲ್ಲಿ ದೇವಾಲಯ ಜೀರ್ಣೋದ್ಧಾರ, ಸನಾತನ ಧರ್ಮಸಭೆಯ ಸ್ಥಾಪನೆ, ಪೂರ್ವಾಪರ ಪ್ರಯೋಗಗಳ ಮುದ್ರಣ, ಹೀಗೆ ಅನೇಕ ರೀತಿಗಳಲ್ಲಿ ಪ್ರಾಚೀನ ಸಂಪ್ರದಾಯರಕ್ಷೆಗೆ ಈ ಮಹನೀಯರು ಹಗಲಿರುಳೂ ದುಡಿದವರು. ದಕ್ಷರೂ, ಪ್ರಾಮಾಣಿಕರೂ, ವಿದ್ವಾಂಸರೂ, ವಿದ್ವತ್ಪ್ರಿಯರೂ, ಸಜ್ಜನರೂ, ಆಚಾರ್ಯಭಕ್ತಿ ನಿಷ್ಠರೂ, ವಿನಯಾನ್ವಿತರೂಪವಾದ ಸಮರ್ಥರೂ, ಅಪೂರ್ವ ಶೈಲಿಯಲ್ಲಿ ಗ್ರಂಥನಿರ್ಮಾಣ ನಿಪುಣರೂ, ವಾಗ್ಮಿಗಳೂ ಆದ ಈ ಮಹಾಪುರುಷರು ಈ ದಿವ್ಯ ಗ್ರಂಥ ಪ್ರಕಾಶಕ್ಕೆ ಆವಶ್ಯವಾದ ದ್ರವ್ಯ ಸಂಗ್ರಹವನ್ನೂ ನಾನಾ ಮುಖೇನ ಮಾಡಿಕೊಂಡು, ಸಮರ್ಥ ಸಂಪಾದಕ ಮಂಡಳಿಯನ್ನು ರಚಿಸಿ, ಅವರ ಸಲಹೆಗಳನ್ನು ಉಪಯೋಗಿಸಿ, ತಾವೇ ಈ ಅದ್ಭುತ ವ್ಯಾಖ್ಯಾನವನ್ನು ಮಾಡಿ, ಅವಿರತವಾದ ತಮ್ಮ ಕಾರ್ಯಬಾಹುಳ್ಯ ಮಧ್ಯದಲ್ಲಿ ಒಂದು ಪವಾಡವನ್ನೇ ಮಾಡಿ ತೋರಿಸಿದ್ದಾರೆ. ಕೈಂಕರ್ಯಾಸಕ್ತರಿಗೆ ದೇವರು ಒದಗಿ ಬರುವನೆಂಬುದಕ್ಕೆ ಇದೊಂದು ನಿದರ್ಶನ.

ಈ ಮಹನೀಯರ ಕೃಪಾಕಟಾಕ್ಷಕ್ಕೆ ಬಿದ್ದವನು ಈ ಲೇಖಕದಾಸ. ಶ್ರೀ ಕೃಷ್ಣಮಾಚಾರ್ಯರು ಹಿಡಿದ ಕೆಲಸವನ್ನು ಎಂದೂ ಬಿಡದವರೆಂಬುದನ್ನು ಕಣ್ಣಿಂದ ಕಂಡವನು. ದಾಸನು ನಡೆಸಿದ ಅಲ್ಪ ಗ್ರಂಥ ಕೈಂಕರ್ಯವನ್ನು ಕಂಡು, ಕೇಳಿ, ದೂರದಲ್ಲಿದ್ದವನನ್ನೂ ಹತ್ತಿರ ಸೆಳೆದುಕೊಂಡು, ಗುಣೈಕ ಪಕ್ಷಪಾತಿಗಳಾಗಿ, ದಾಸನಿಗೆ ಈ ಲೇಖನವನ್ನು ಬರೆಯುವಂತೆ ನಿಯಮಿಸಿದವರು. ಶಿಷ್ಟಾಗ್ರೇಸರರೂ, ಬುಧಾಗ್ರೇಸರರೂ, ಶಿಷ್ಟಾಚಾರ–ವಿಚಾರ ಸಂರಕ್ಷಕರೂ, ಆಗಿರುವ ಈ ಮಹನೀಯರ ಆಜ್ಞೆಯನ್ನು ಲಂಘಿಸಲಾರದೆ ನಾಲ್ಕು ಮಾತುಗಳನ್ನು ಗ್ರಂಥಾವಲೋಕನ ರೀತಿಯಲ್ಲಿ ಬರೆಯುವ ಭಾಗ್ಯವೊದಗಿದುದು ಒಂದು ಪ್ರಸಾದವೇ.

ಪ್ರಕೃತ **ಸಾರಚಂದ್ರಿಕಾ** ವ್ಯಾಖ್ಯಾನದಲ್ಲಿ, ಅದರೊಡನೆ ಮೂಲ ಗ್ರಂಥವೂ ಸೇರಿದ್ದು ವಾಚಕರಿಗೆ ಮೂಲವನ್ನು ಅನುಸಂಧಿಸುತ್ತಾ ಅರ್ಥವನ್ನು ಅನುಭವಿಸುವ ಯೋಗವಾಗುವಂತೆ ಗ್ರಂಥವನ್ನು ಮುದ್ರಿಸಲಾಗಿದೆ. ಶೈಲಿಯ ಭೋಗ್ಯತೆಯನ್ನು ಓದಿಯೇ ತಿಳಿಯಬೇಕು.

ಶ್ರೀಮದ್ರಹಸ್ಯತ್ರಯಸಾರದ **ಅರ್ಥಾನುಶಾಸನ ಭಾಗ** ವೆಂದು ಪರಿಗಣಿತವಾದ ಮೊದಲು ೨೨ ಅಧಿಕಾರಗಳೂ ಪ್ರಕೃತ ಗ್ರಂಥದಲ್ಲಿ ವ್ಯಾಖ್ಯಾತವಾಗಿವೆ. ಇನ್ನುಳಿದ ಹತ್ತು ಅಧಿಕಾರಗಳೂ ಬೇಗ ವ್ಯಾಖ್ಯಾನದಲ್ಲಿ ಹೊರ

ಬರುವಂತೆ ಶ್ರೀ ಮಾಲೋಲ ನೃಸಿಂಹನೂ ಪೂರ್ವಾಚಾರ್ಯರೂ ಅನುಗ್ರಹಿಸಬೇಕೆಂದು ಕೋರುತ್ತಾ, ಶ್ರೀ ಕೃಷ್ಣಮಾಚಾರ್ಯರ ಈ ಸಾಹಸಕ್ಕೆ ಮಂಗಳಾ ಶಾಸನ ಮಾಡುವ.

ಶ್ರೀವೈಷ್ಣವ ಪಾದರೇಣುಃ

ದಿನಾಂಕ 1–2–1990

**ಕಂದಾಡೈ ಶ್ರೀ ನಾರಾಯಣಾಚಾರ್ಯ**
ಮುಖ್ಯಸ್ಥರು, ಆಂಗ್ಲಸಾಹಿತ್ಯ ವಿಭಾಗ,
ಕರ್ನಾಟಕ ಆರ್ಟ್ಸ್ ಕಾಲೇಜು
ಧಾರವಾಡ

ಶ್ರೀಮತೇ ಲಕ್ಷ್ಮೀನೃಸಿಂಹ ಪರಬ್ರಹ್ಮಣೇನಮಃ

ಶ್ರೀಮತೇ ಶಠಗೋಪಾಯ ನಮಃ ।

ಶ್ರೀಮತೇ ರಾಮಾನುಜಾಯ ನಮಃ ।

ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ !

ಶ್ರೀಮತೇ ಸುಂದರಸೌಮ್ಯ ನಾರಾಯಣಾರ್ಯ ಮಹಾದೇಶಿಕಾಯ ನಮಃ ।

ಶ್ರೀಮತೇ ಶ್ರೀನಿವಾಸ ಗೋಪಾಲಾರ್ಯ ಮಹಾದೇಶಿಕಾಯ ನಮಃ ।

# ವಿಜ್ಞಾಪನೆ

ಶ್ರೀ ಮನ್ನಿಗಮಾಂತ ಮಹಾದೇಶಿಕನ್‌ರವರು, ತಮ್ಮ ಚರಮದಶೆಯಲ್ಲಿ ಶ್ರೀ ಮದ್ರಹಸ್ಯತ್ರಯಸಾರವೆಂಬ ಸತ್ಸಂಪ್ರದಾಯಾರ್ಥ ಗರ್ಭಿತವಾದ ಗ್ರಂಥರತ್ನವನ್ನು ಅನುಗ್ರಹಿಸಿರುತ್ತಾರೆ. ಶ್ರಿಯಃ ಪತಿಯು ಮಹಾಲಕ್ಷ್ಮಿಗೆ ಉಪದೇಶಿಸಿ, ಅವಳು ವಿಷ್ವಕ್ಸೇನರಿಗೆ ಉಪದೇಶಿಸಿ, ವಿಷ್ವಕ್ಸೇನರು ನಮ್ಮಾಳ್ವಾರಿಗೆ ಉಪದೇಶಿಸಿ, ತನ್ಮೂಲಕ ಪರಂಪರೆಯಾಗಿ ಶ್ರೀ ಭಾಷ್ಯಕಾರರಿಗೆ ಉಪದೇಶಿಸಿಲ್ಪಟ್ಟು, ಅವರ ಶಿಷ್ಯ ಪ್ರಶಿಷ್ಯರುಗಳ ಮೂಲಕ ಶ್ರೀಮನ್ನಿಗಮಾಂತ ಮಹಾದೇಶಿಕನ್‌ರವರಿಗೆ ಉಪದೇಶ ಮಾಡಲ್ಪಟ್ಟ ಪರಮರಹಸ್ಯಾರ್ಥವಿದು. ಶ್ರೀ ಭಾಷ್ಯಕಾರರ ಹದಿನೆಂಟಾವರ್ತಿ ತಿರುಕ್ಕೋಟ್ಟಿಯೂರ್ ನಂಬಿಗಳ ಪಾದ ಪದ್ಮಗಳಲ್ಲಿ ನಮಸ್ಕರಿಸಿ ಪ್ರಾರ್ಥಿಸಿ, ಚಿರ ಪರೀಕ್ಷೆಯಿಂದ ನಂಬಿಗಳು ಪರಮಕೃಪೆಯಿಂದ ಉಪದೇಶಿಸಿದ ಪರಮ ರಹಸ್ಯಾರ್ಥಗಳೂ ಇವುಗಳೇ. ಶ್ರೀ ಭಾಷ್ಯಕಾರರು ತಮ್ಮನ್ನು ಆಶ್ರಯಿಸಿದ ಶಿಷ್ಯರಗಳಿಗೆಲ್ಲಾ ಈ ಸಾರಾರ್ಥಗಳನ್ನು ಉಪದೇಶಿಸಿದರು. ಅವರುಗಳಲ್ಲಿ ಮಡೈಪ್ಪಳ್ಳಿ ಯಾಚ್ಚಾನ್ ಎಂದು ಸುಪ್ರಸಿದ್ಧರಾದ ಪ್ರಣತಾರ್ತಿಹರ ವರದ ಗುರುಗಳು ಆಗಾಗ್ಯೆ ಸಂಶಯಗಳನ್ನೆಲ್ಲಾ ಶ್ರೀ ಭಾಷ್ಯಕಾರರಿಂದ ಕೇಳಿ ತಿಳಿದುಕೊಂಡು ತಮ್ಮ ಶಿಷ್ಯರುಗಳಿಗೆ ಉಪದೇಶಿಸಿದುದರಿಂದ, ಈ ಸಂಪ್ರದಾಯಾರ್ಥಗಳಿಗೆ "ಮಡೈಪ್ಪಳ್ಳಿವಂದಮಣಮ್" – "ಯತಿರಾಜ ಮಹಾನಸ ಪರಿಮಳ" ಎಂದು ವ್ಯಪದೇಶ.

ಈ ಅರ್ಥಗಳನ್ನೇ ಕೂರತ್ತಾಳ್ವಾನ್, ಪರಾಶರಭಟ್ಟರ್, ನಂಜೀಯರ್ ಪ್ರಭೃತಿಗಳೂ ತಮ್ಮ ಪಂಚಸ್ತವ, ಶ್ರೀ ಗುಣರತ್ನಕೋಶ, ಶ್ರೀಸ್ತವ, ಶ್ರೀಸೂಕ್ತಭಾಷ್ಯಾದಿಗಳಲ್ಲಿ ನಿರೂಪಿಸಿರುತ್ತಾರೆ ಶ್ರೀ ಮನ್ನಿಗಮಾಂತ ಮಹಾದೇಶಿಕರು ಈ ಗ್ರಂಥಗಳನ್ನು ಆದರಿಸಿ, ತಾವು ಹೇಳುವ ಸಂಪ್ರದಾಯಾರ್ಥಗಳಿಗೆ ಪ್ರಮಾಣವಾಗಿ ಅಲ್ಲಲ್ಲೇ ಎತ್ತಿ ತೋರಿಸಿರುತ್ತಾರೆ ಕಾಲಕ್ರಮದಲ್ಲಿ ಉಪದೇಶ ಪರಂಪರೆಯಲ್ಲಿ ಬಂದ ಅರ್ಥಗಳಲ್ಲಿ ಅತಿವಾದಗಳು ತಲೆದೋರಿ, ಅವುಗಳನ್ನೇ ಯಥಾರ್ಥವಾಗಿ ಗ್ರಹಿಸಿ ವಿಪರೀತಾರ್ಥಗಳೂ, ಮುಖ್ಯವಾಗಿ ತತ್ವಹಿತ ಪುರುಷಾರ್ಥಗಳಲ್ಲಿಯೂ, ವಿಶೇಷತಃ ಪ್ರಪತ್ತಿ ಶಾಸ್ತ್ರದಲ್ಲಿಯೂ ಭಿನ್ನಾರ್ಥಗಳೂ ತಲೆ ದೋರಿದುವು. ಪರಮತ ಖಂಡನೆ ಮಾಡಿ ಸ್ವಮತ ಸ್ಥಾಪನೆಯನ್ನು ಮಾಡಿದ ಆಚಾರ್ಯರಿಗೆ, ಸ್ವಮತದಲ್ಲಿಯೇ ಒಡಕುಗಳು ಉಂಡಾಗಿದುದಕ್ಕೆ ವ್ಯಸನವು ಏರ್ಪಟ್ಟು, ತಮ್ಮ ಅವತಾರದ ಪರಮ ಪ್ರಯೋಜನವೆಂದು ಹೇಳುವಂತೆ ಈ ಗ್ರಂಥ ರತ್ನವನ್ನು ರಚಿಸಿ, ಆ ಭಿನ್ನಾರ್ಥಗಳನ್ನು ಸರಿಪಡಿಸಿ ಸಂಪ್ರದಾಯವನ್ನು ರಕ್ಷಿಸಿದ್ದಾರೆ. ನಮ್ಮಾಳ್ವಾರ್, ನಾಥಮುನಿಗಳು, ಆಳವಂದಾರ್, ಶ್ರೀ ಭಾಷ್ಯಕಾರರೇ ಮೊದಲಾದ ಪರಮಾಚಾರ್ಯರುಗಳು ಅನುಷ್ಠಿಸಿ ಬಂದ ಶರಣಾಗತಿ ಶಾಸ್ತ್ರಾರ್ಥದಲ್ಲಿ ಏರ್ಪಟ್ಟ ಸಂಶಯ ವಿಪರ್ಯಯಗಳನ್ನು ಹೋಗಲಾಡಿಸಿ, ಆ ಶಾಸ್ತ್ರಾರ್ಥಗಳನ್ನು ರಕ್ಷಿಸಿಕೊಟ್ಟ ಪರಮೋಪಕಾರವು ಶ್ರೀ ಮನ್ನಿಗಮಾಂತ ಮಹಾದೇಶಿಕರವರಿಗೇ ಸಲ್ಲತಕ್ಕದ್ದು. ಇದರಿಂದಾಗಿ ಭಕ್ತಿ ವಿದ್ಯೆಯಲ್ಲಿ ಅಧಿಕಾರವಿಲ್ಲದ, ಅಕಿಂಚನರಾದ ನಾವು ಈವತ್ತಿಗೂ

ಸದಾಚಾರ್ಯ ಸಮಾಶ್ರಯಣವನ್ನು ಮಾಡಿ, ಪ್ರಪತ್ತಿ ವಿದ್ಯೆಯನ್ನು ಅನುಷ್ಠಿಸಿ ಮೋಕ್ಷವನ್ನು ಪಡೆಯುವವರಾಗಿದ್ದೇವೆ ಪ್ರಪತ್ತಿ ವಿದ್ಯೆಯು ಮೋಕ್ಷಕ್ಕೆ ಸಾಕ್ಷಾತ್ ಸಾಧನವೆಂದು ಎತ್ತಿ ಹೇಳಿ, ಅವುಗಳ ಅಂಗಾಂಗಿಗಳ ಸ್ವರೂಪವನ್ನು ಸಪ್ರಮಾಣವಾಗಿ ನಿರೂಪಿಸಿ, ಇದು ವಿಧೇಯಾತ್ಮಕವಾದ ಜ್ಞಾನ ವಿಶೇಷವೆಂದು ಸ್ಥಾಪಿಸಿದ ಹಿರಿಮೆಯು ಆಚಾರ್ಯರಿಗೇನೆ ಸಲ್ಲತಕ್ಕದುದು ಇಂಥಹ ವಾದ ವಿಪ್ರತಿಪತ್ತಿಗಳಿಗೆ ಇದಕ್ಕೆ ಪೂರ್ವದಲ್ಲಿ ಅವಕಾಶವಿರಲಿಲ್ಲವೆಂದು ಹೇಳಿದರೂ ತಪ್ಪಾಗಲಾರದು. ಇದರಿಂದಾಗಿ ಈಶ್ವರನ ಚೇತನೋದ್ಧಾರಣ ಕೃತ್ಯವು ಇಲ್ಲಿಗೆ ಸಫಲಗೊಂಡಿದೆ.

ಶ್ರೀ ಮನ್ನಿಗಮಾಂತ ಮಹಾದೇಶಿಕರವರು ಭಗವದ್ರಾಮಾನುಜರ ಶ್ರೀ ಭಾಷ್ಯಾದಿ ಗ್ರಂಥಗಳ ಅನವರತ ಪರಿಚಯದಿಂದ ತಮ್ಮ ಆಯುಸ್ಸನ್ನು ಕಳೆದುದಾಗಿ, "ನಿರ್ವಿಷ್ಟಂ ಯತಿಸಾರ್ವಭೌಮವಚಸಾಂ ಆವೃತ್ತಿಭಿರ್ಯೌವನಂ", ಎಂದು ಅನುಸಂಧಾನ ಮಾಡಿದ್ದಾರೆ. ಪರವಾದಿ ನಿರಸನ ಮಾಡಿ ಸ್ವಮತ ಸ್ಥಾಪನೆಯನ್ನು ಮಾಡಲು, ಶತದೂಷಣೀ ತತ್ವಮುಕ್ತಾ, ಕಲಾಪಾದಿ ಉದ್ಗ್ರಂಥಗಳನ್ನು ರಚಿಸಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ನಿಷ್ಕಂಟಕವಾಗಿ ಸ್ಥಾಪಿಸಿರುತ್ತಾರೆ ಪಂಡಿತ ಪಾಮರ ಜನ ಹೃದಯಂಗಮವಾಗಿ ಕಾವ್ಯ ನಾಟಕಗಳನ್ನೂ ಸ್ತೋತ್ರಪಾಠಗಳನ್ನೂ ರಚಿಸಿ ವೇದಾಂತಾರ್ಥಗಳನ್ನು ಎಲ್ಲರೂ ಸುಲಭವಾಗಿ ತಿಳಿದುಕೊಳ್ಳಲು ಅವಕಾಶವನ್ನು ಕಲ್ಪಿಸಿರುತ್ತಾರೆ. ಹಾಗೆಯೇ ಚಿಲ್ಲರೆ ರಹಸ್ಯ ಗ್ರಂಥಗಳೆಂದು ಕರೆಯಲ್ಪಡುವ ಚಿಕ್ಕ ಪುಟ್ಟ ಗ್ರಂಥಗಳನ್ನು ರಚಿಸಿ ಕಾಲಾವಕಾಶವಿಲ್ಲದ ಈಗಿನ ಕಾಲದವರೂ,ಸುಲಭವಾಗಿಯೂ ಸಂಗ್ರಹವಾಗಿಯೂ ವೇದಾಂತಾರ್ಥಗಳನ್ನು ತಿಳಿದುಕೊಂಡು ಆತ್ಮೋಜ್ಜೀವನವನ್ನು ಪಡೆಯಲು ಸಹಕರಿಸಿದ್ದಾರೆ

ಪ್ರಕೃತ ಶ್ರೀಮದ್ರಹಸ್ಯತ್ರಯಸಾರವು ವಿಸ್ತಾರವಾಗಿ ಸಕಲವೇದಾಂತಾರ್ಥಗಳನ್ನೂ ನಿರೂಪಿಸುವ ಸಂಪ್ರದಾಯ ಗ್ರಂಥವು ಇದು ಅರ್ಥಾನುಶಾಸನಭಾಗ (22 ಅಧಿಕಾರ), ಸ್ಥಿರೀಕರಣ ಭಾಗ (4 ಅಧಿಕಾರ ಪದವಾಕ್ಯ ಯೋಜನಾಭಾಗ (3 ಅಧಿಕಾರ), ಸಂಪ್ರದಾಯ ಪ್ರಕ್ರಿಯಾಭಾಗ (3 ಅಧಿಕಾರ) ವೆಂದು ನಾಲು ವಿಭಾಗವಾಗಿ, 32 ಅಧಿಕಾರಗಳಿಂದ ಕೂಡಿದೆ

**ವೇದ ಪ್ರಾಮಾಣ್ಯ**

"ಅಖಿಲ ಶ್ರುತೀಯಂ ರಾಮಾನುಜೀಯಂ" ಎಂದು ವಿಶಿಷ್ಟಾದ್ವೈತಿಗಳಾದ ನಾವು ಸರ್ವ ಶ್ರುತಿಗಳಿಗೂ ಅಂದರೆ ಭೇದಾ ಭೇದ ಘಟಕ ಶ್ರುತಿಗಳಿಗೆ ಮುಖ್ಯ ಪ್ರಾಮಾಣ್ಯವನ್ನು ಅಂಗೀಕರಿಸಿದ್ದೇವೆ ವೇದಗಳು ಅಪೌರುಷೇಯ. ಇದನ್ನು ಶ್ರೀ ಭಾಷ್ಯಾದಿಗಳಲ್ಲಿ ವಿಸ್ತಾರವಾಗಿ ನಿರೂಪಿಸಿರುತ್ತಾರೆ. ವೇದಾಂತಾರ್ಥಗಳನ್ನು ಇತಿಹಾಸ ಪುರಾಣಗಳ ಮೂಲಕ ವಿಶದವಾಗಿ ತಿಳಿದು ಅದಕ್ಕನುಗುಣವಾಗಿಯೇ ಪೂರ್ವಾಚಾರ್ಯರ ಶ್ರೀ ಸೂಕ್ತಿಗಳು ಬರೆಯಲ್ಪಟ್ಟಿವೆ. ಇದರಲ್ಲಿ ಒಂದು ವೈಶಿಷ್ಟ್ಯವಿದೆ. ನಿತ್ಯಸೂರಿಗಳ ಅವತಾರರಾದ ನಮ್ಮಾಳ್ವಾರ್ ಪ್ರಭೃತಿಗಳ ದಿವ್ಯ ಸೂಕ್ತಿಗಳು ಉಪಬೃಂಹಣಗಳಲ್ಲಿ ಶ್ರೇಷ್ಠವಾದವು ಇವುಗಳನ್ನು ದ್ರಮಿಡ ವೇದವೆಂದು ನಾವು ವಿಶೇಷವಾಗಿ ಆದರಿಸುತ್ತೇವೆ. ಈ ಆಳ್ವಾರುಗಳು ಭಗವಂತನ ಸ್ವರೂಪ ಸ್ವಭಾವಗಳನ್ನು ಸಾಕ್ಷಾತ್ಕರಿಸಿ, ಸಾಕ್ಷಾತ್ಕರಿಸಿದ ರೀತಿಯಲ್ಲಿಯೇ ತಮ್ಮ ದಿವ್ಯಸೂಕ್ತಿಗಳಲ್ಲಿ ನಿರೂಪಿಸಿರುತ್ತಾರೆ ಭಕ್ತಿ ಪೂರಿತವಾದ ಶ್ರೀ ಸೂಕ್ತಿಗಳಿವು. ಸಂಪ್ರದಾಯಾರ್ಥಗಳಿಗೆ ಇವುಗಳು ಮೂಲ. "ಪರಮಪುರುಷನೈ ಉಳ್ಳಪಡಿಯೇ ಆಳ್ವಾರ್ ತಾಮ್ ತಮ್ಮುಡೈಯ ತಿರುವುಳ್ಳತ್ತಾಲೇ ಅನುಭವಿತ್ತು, ಅವ್ವನುಭವಜನಿತ ನಿರವಧಿಕ ಪ್ರೀತಿಯಾಲೇ ಅವನೈ ಅನುಭವಿತ್ತಪಡಿಯೇ ಪೇಶುಹಿರಾರ್" ಎಂದು ನಮ್ಮಾಳ್ವಾರ್ ತಿರುವಾಯ್ ಮೊಳಿಗೆ ಭಗವದ್ರಾಮಾನುಜರು ಉಪದೇಶಿಸಿದ ಅರ್ಥಗಳನ್ನು ಅವರ ಜ್ಞಾನ ಪುತ್ರರಾದ ತಿರುಕ್ಕುರುಹೈಪ್ಪಿರಾನ್ ಪಿಳ್ಳಾನ್ ಅವರು 'ತಿರುವಾರಾಯಿರಪ್ಪಡಿ' ಎಂಬ ಗ್ರಂಥದಲ್ಲಿ ಅನುಗ್ರಹಿಸಿ ಸಿರುವಾಗ ಬರೆದಿರುವ ಅವತಾರಿಕೆಯಿದು

ಇದರಿಂದಾಗಿ ನಮ್ಮ ಸಿದ್ಧಾಂತವು ಸಂಸ್ಕೃತ ದ್ರಾವಿಡಾತ್ಮಕವಾದ ಉಭಯ ವೇದಾಂತಗಳಿಂದ ಪರಿಕರ್ಮಿತ

ವಾದದ್ದು ಈ ಪ್ರಾಶಸ್ತ್ಯವು ಇತರ ಸಿದ್ಧಾಂತಿಗಳಿಗೆಬಾರದು. ಶಾಸ್ತ್ರಗಳ ಮೂಲಕವಾಗಿಯೂ, ಪ್ರತ್ಯಕ್ಷವಾಗಿ ಉಪದೇಶ ಮೂಲಕವಾಗಿಯೂ ತಿಳಿದ ಸಕಲ ವೇದಾಂತಾರ್ಥಗಳನ್ನೂ ಪರಸ್ಪರ ವಿರುದ್ಧವಿಲ್ಲದೆ ನಿರೂಪಿಸಲ್ಪಟ್ಟ ಉಭಯ ವೇದಾಂತ ಸಿದ್ಧಾಂತವಿದು.

ಅಂದಮಿಲಾಪ್ಪೇರಿನ್ಬಮರುಂದ ವೇರ್ಕ್ಕುಮ್, ಅಡಿಯೋಮ್ಕ್ಕೆ ಅರಿವುಡನೇಎನ್ರುಂಕಾತ್ತು
ಮುಂದೈವಿನ್ನೈ ನಿರೈವಳ್ಳಿಯಿಲೊಳ್ಳಾಹಾದ್ಯೈವ್ಕ್ಕೆ ಮುನ್ನಿಲೈಯಾಂದೇಶಿಕರ್ಆವಮ್ ಮುನ್ನೇಶೇರ್ನ್ದು,
ಮಂದಿರಮುಮ್ ಮಂದಿರತ್ತಿನ್ ವಳ್ಳಿಯುಂಕಾಟ್ಟಿ, ವಳ್ಳಿಪ್ಪಡುತ್ತಿವಾನೇತ್ತಿ ಅಡಿವೈಕ್ಕೊಳ್ಳ,
ಶಂದೆಯಿನ ನಿನ್ರ ತನಿತ್ತಿರುಮಾಲ್ ತಾಳಿಲ್ ತಲೈವೈತ್ತೋಮ್ ಶರಗೋಪನರುಳಿನಾಲೇ ॥

(ಅಮೃತಾಸ್ವಾದಿನೀ–28)

ಎಂದು ಅಮೃತಾ ಸ್ವಾದಿನಿಯಲ್ಲಿ ಹೇಳಲ್ಪಟ್ಟಂತೆ ನಾವುಗಳೆಲ್ಲಾ ಶರಣಾಗತಿಯನ್ನು ಅನುಷ್ಠಿಸಿ ಭಗವಂತನ ಪಾದಾರವಿಂದಗಳನ್ನು ಪಡೆಯುವುದು ನಮ್ಮಾಳ್ವಾರವರ ಕೃಪೆಯಿಂದಲೇ ಮೇಲೂ ತಿರುವಷ್ಟಾಕ್ಷರವನ್ನು ಸಾರ್ಥವಾಗಿ ಸರ್ವೇಶ್ವರನಿಂದ ಪಡೆದ ತಿರುಮಂಗೈಯಾಳ್ವಾರ್ ಪ್ರಬಂಧಗಳೂ ಆ ಅಷ್ಟಾಕ್ಷರದಲ್ಲಿ ನಿರೂಪಿಸಿರುವ ಪರಮರಹಸ್ಯಾರ್ಥಗಳೇನು ದೇವತಾಂತರ ಭಜನ ಪರಿತ್ಯಾಗವೇನು ಭಾಗವತ ಕೈಂಕರ್ಯ ಪ್ರಾಧಾನ್ಯವೇನು ಇವುಗಳಿಗೆ ಮೂಲ ಪ್ರಮಾಣಗಳಾಗಿವೆ ತಿರುಪ್ಪಾಣಾಳ್ವಾರ್ ಸಾಧಿಸಿರುವ 'ಅಮಲನಾದಿಪಿರಾನ್' ಪ್ರಬಂಧವೂ ಅಷ್ಟಾಕ್ಷರದ ಅರ್ಥ ವಿಶೇಷಗಳನ್ನು ಯಥಾರ್ಥವಾಗಿ ಪ್ರತಿಪಾದಿಸುತ್ತವೆಯೆಂಬುದನ್ನು "ಅಮಲನಾದಿ ಪಿರಾನ್", ವ್ಯಾಖ್ಯಾನದಲ್ಲಿ ಆಚಾರ್ಯರು ಪ್ರತಿಪಾದಿಸಿ, "ವೇದಿಯರ್ ತಾಮ್ ವಿರಿತ್ತುರೈಕ್ಕುಂವಿಳೈವುಕ್ಕೆಲ್ಲಾಂ ವಿದ್ಯೆಯಾಹುಮಿದು"–ವೇದಗಳನ್ನು ಅರಿತವರು ವಿಸ್ತಾರವಾಗಿ ನಿರೂಪಿಸಿರುವ ಅರ್ಥಗಳಿಗೆ ಈ ಅಷ್ಟಾಕ್ಷರವೂ ಅದರ ಅರ್ಥಪ್ರತಿ ಪಾದಕವಾದ "ಅಮಲನಾದಿಪಿರಾನ್" ಪ್ರಬಂಧವೂ ಬೀಜವೆಂದು ಹೇಳಿರುತ್ತಾರೆ ಅದೂ ಅಲ್ಲದೆ "ಪಾಣ್ ಪೆರುಮಾಳ್ ಪಾಡಿಯದೋರ್ ಪಾಡಲ್ ಪತ್ತುಂ ಪಳ್ಳಮರೈಯಿನ್ ಪೊರಳೆನ್ರು ಪರವುಹಿನ್ರೋಮ್" ಎಂದು "ಅಮಲನಾದಿಪಿರಾನ್" ಪ್ರಬಂಧವು ಅನಾದಿಯಾದ ವೇದಗಳ ಸಾರವೆಂದು ಹೊಗಳಿದ್ದಾರೆ.

ಹೀಗೆಯೇ ಹತ್ತು ಆಳ್ವಾರುಗಳೂ ಉಪದೇಶಿಸಿರುವ, ಶೆಯ್ಯತಮಿಳ್ಮಾಲೈಹಳ್ – ಋಜುಗಳಾದ ತಮಿಳು ಪ್ರಬಂಧಗಳನ್ನು, ನಾವು ಗುರು ಮುಖವಾಗಿ ಅಧ್ಯಯನ ಮಾಡಿ, ವೇದಗಳಲ್ಲಿ ತಿಳಿಯದ ಅರ್ಥವಿಶೇಷಗಳನ್ನೆಲ್ಲಾ, ತಿಳಿವಾಗಿ ತಿಳಿದು ಕೊಂಡಿದ್ದೇವೆಂದು, 'ಪೊಯ್ಹೈಮುನಿಪೂದತ್ತಾರ್' ಎಂದಾರಂಭಿಸುವ ಅಧಿಕಾರ ಸಂಗ್ರಹದ ಮೊದಲನೆಯ ಪಾಶುರದಲ್ಲಿ ಅನುಗ್ರಹಿಸಿರುತ್ತಾರೆ ಇದರಿಂದಾಗಿ ಆಳ್ವಾರುಗಳ ಪ್ರಬಂಧಗಳು ಸಂಪ್ರದಾಯಾರ್ಥಕ್ಕೆ ಮೂಲಗಳು ಎಂಬುದು ಏರ್ಪಡುತ್ತದೆ.

"ಇತ್ಥಂ ಶಾರೀರಕಾರ್ಥ ಕ್ರಮಮಿಹವಿಶದಂವಿಂಶತಿರ್ವಕ್ತಿ ಸಾಗ್ರಾ" ಎಂದು ದ್ರಮಿಡೋಪನಿಷತ್ತಾತ್ಪರ್ಯ ರತ್ನಾವಳಿಯಲ್ಲಿ ಶಾರೀರಕ ಮೀಮಾಂಸೆಯ ಅರ್ಥಗಳನ್ನು ನಮ್ಮಾಳ್ವಾರ್ ಪ್ರಬಂಧಗಳ ಮೊದಲು ಇಪ್ಪತ್ತು ಪಾಶುರಗಳೂ ಕೊನೆಯಲ್ಲಿ "ಶಾರ್ವೇತವನೆರಿಕ್ಕು (10 – 4) ಎಂದಾರಂಭಿಸಿ ಕೊನೆಯವರೆಗೆ ಹಾಡಿರುವ ಪಾಶುರಗಳೂ ಉಪದೇಶಿಸುತ್ತವೆಯೆಂದು ಆಚಾರ್ಯರು ಅನುಗ್ರಹಿಸಿರುವುದರಿಂದ ಇವುಗಳೇ ಶ್ರೀ ಭಾಷ್ಯಾದಿ ಗ್ರಂಥಗಳಲ್ಲಿ ನಿರೂಪಿಸಲ್ಪಟ್ಟಿರುವ ಸಂಪ್ರದಾಯಾರ್ಥಗಳಿಗೆ ಮೂಲಭೂತಗಳೆಂದು ತಿಳಿಸಲ್ಪಡುತ್ತವೆ.

ಇವುಗಳನ್ನು ಮನಸ್ಸಿನಲ್ಲಿಟ್ಟುಕೊಂಡೇ, ಆಚಾರ್ಯಸಾರ್ವಭೌಮರು ರಹಸ್ಯತ್ರಯಸಾರದ ಕೊನೆಯಲ್ಲಿ, "ಇವ್ವರ್ಥಂಗಳೆಲ್ಲಾಮ್ ಸತ್ಸಂಪ್ರದಾಯತ್ತೋಡೇ ಶ್ರೀ ಭಾಷ್ಯಂ ಚಿರಕಾಲಂ ಪರಿಚಯಂ ಪಣ್ಣಿನ ಮಹಾನ್‌ಗಳುಕ್ಕು ನಿಲವಾಹುಮ್" ಎಂದು ತಾವು ರಹಸ್ಯತ್ರಯಸಾರದಲ್ಲಿ ಅನುಗ್ರಹಿಸಿರುವ ಅರ್ಥಗಳೆಲ್ಲಾ ಸತ್ಸಂಪ್ರದಾಯತ್ತೊಡನೆ ಅಂದರೆ ಮೇಲೆ ಹೇಳಿದ ಆಳ್ವಾರುಗಳ ಶ್ರೀಸೂಕ್ತಿಗಳೊಡನೆ ಶ್ರೀ ಭಾಷ್ಯವನ್ನು ಅನೇಕಾವರ್ತಿ

ಕಾಲಕ್ಷೇಪ ಮಾಡಿದವರಿಗೇನೆ ಸ್ಥಿರ ಪ್ರತಿಷ್ಠಿತವಾಗತ್ತವೆ ಎಂದು ಅನುಗ್ರಹಿಸಿರುತ್ತಾರೆ "ಮಾರನ್ ಮರೈಯುಮ್ ಇರಾಮಾನುಜನ್ ಭಾಷ್ಯಮುಮ್ ತೇರುಂ ಪಡಿಯುರೈಕ್ಕುಮ್ ಶೀರ್" – ನಮ್ಮಾಳ್ವಾರವರ ವೇದವಾದ ತಿರುವಾಯ್‌ಮೊಳಿಯನ್ನೂ ಭಗವದ್ರಾಮಾನುಜರ ಶ್ರೀ ಭಾಷ್ಯವನ್ನೂ ಒಂದು ಗೂಡಿಸಿ ಉಪದೇಶಿಸುವ ಸಾಮರ್ಥ್ಯವನ್ನುಳ್ಳವರು, ಎಂದು ಶ್ರೀ ದೇಶಿಕರನ್ನು ಅವರ ಶಿಷ್ಯರು ಗುಣಗಾನ ಮಾಡಿರುವುದು ಗಮನಾರ್ಹ.

ಏತಾವತಾ ಆಳ್ವಾರುಗಳ ಶ್ರೀ ಸೂಕ್ತಿಗಳೇ ಸತ್ಸಂಪ್ರದಾಯಾರ್ಥ ಬೋಧಕಗಳು. ನಮ್ಮ ಪೂರ್ವಾಚಾರ್ಯರುಗಳು ಸಂಸ್ಕೃತವೇದ, ದ್ರಮಿಡ ವೇದವೆಂಬ ಉಭಯ ವೇದಗಳಲ್ಲಿ ಪರಿನಿಷ್ಠಿತ ಜ್ಞಾನರಾಗಿ, ಉಭಯ ವೇದಾಂತಾಚಾರ್ಯರೆಂದು ಕೊಂಡಾಡಲ್ಪಡುತ್ತಾರೆ. ಈ ಎರಡು ವೇದಗಳೂ ಪರಸ್ಪರ ಹೊಂದಿಕೊಂಡಿವೆ ಸಂಸ್ಕೃತ ವೇದದ ಅರ್ಥವನ್ನು ದ್ರಮಿಡವೇದವು ವಿಶದೀಕರಿಸುತ್ತದೆ ಭಗವದ್ರಾಮಾನುಜರೂ ಶ್ರೀ ಭಾಷ್ಯ ಗ್ರಂಥವನ್ನು ಬೋಧಾಯನ ವೃತ್ತಿಗ್ರಂಥವನ್ನನುಸರಿಸಿಯೂ ಆಳ್ವಾರುಗಳ ಸೂಕ್ತಿಗಳಿಂದ ಲಭ್ಯವಾದ ಉಪದೇಶಾರ್ಥಗಳ ಆಧಾರದ ಮೇಲೆಯೂ ಅನುಗ್ರಹಿಸಿದ್ದಾರೆಂಬುದು ಹಿರಯರ ಮಾತು. ಹೀಗೆ ಉಭಯವೇದಾಂತಾರ್ಥಗಳನ್ನೂ ಶ್ರೀಮದ್ರಹಸ್ಯತ್ರಯಸಾರದಲ್ಲಿಶ್ರೀ ಮನ್ನಿಗಮಾಂತ ಮಹಾದೇಶಿಕರವರು ಅನುಗ್ರಹಿಸಿರುವುದರಿಂದ, ಈ ಗ್ರಂಥರತ್ನವನ್ನು ಸದಾಚಾರ್ಯ ಸಕಾಶದಿಂದ ಕಾಲಕ್ಷೇಪ ಮಾಡಿದವರಿಗೆ ವೇದಾಂತ ಜ್ಞಾನವು ಸುಪ್ರತಿಷ್ಠಿತವಾಗುವುದರಲ್ಲಿ ಸಂಶಯವಿಲ್ಲ.

ಈ ಅದ್ಭುತ ಗ್ರಂಥರತ್ನವು ಬಹಳ ವರ್ಷಗಳ ಹಿಂದೆ ಕನ್ನಡದಲ್ಲಿ ಸವ್ಯಾಖ್ಯಾನ ರೂಪದಲ್ಲಿ ಸಿ ಯಂ ವಿಜಯರಾಘವಾಚಾರ್ಯರೆಂಬ ಮಹಾಪುರುಷರೊಬ್ಬರಿಂದ ಬರೆದು ಅಚ್ಚಿಡಲ್ಪಟ್ಟಿತ್ತು. ಆ ಶ್ರೀ ಕೋಶವು ಈಗ ಲಭ್ಯವಿಲ್ಲ ಇದರಿಂದಾಗಿ ಭಾಗವತರ ಪ್ರೇರೇಪಣೆಯಿಂದಲೂ, ಮುಖ್ಯವಾಗಿ ಶ್ರೀ ಮದಭಿನವರಾಮಾನುಜ ಬ್ರಹ್ಮತಂತ್ರ ಪರಕಾಲ ಮಹಾಧೇಶಿಕನ್‌ರವರ ದಿವ್ಯಾನುಗ್ರಹದಿಂದಲೂ ಅರ್ಥ ಸಹಾಯದಿಂದಲೂ ಈ ದಿವ್ಯಗ್ರಂಥವನ್ನು ಸವ್ಯಾಖ್ಯಾನ ಅಚ್ಚಿಡಲು ಅವಕಾಶವಾಯಿತು "ಶ್ರೀ ಲಕ್ಷ್ಮೀಹಯಗ್ರೀವನ ಅನುಗ್ರಹವು ನಿಮಗಿದೆ ನೀವೇ ಬರೆಯಿರಿ" ಎಂಬುದನ್ನು ಶ್ರೀ ಶ್ರೀ ಸ್ವಾಮಿಗಳವರ ದಿವ್ಯಾದೇಶ ಶ್ರೀ ಮದಭಿನ ರಂಗನಾಥ ಬ್ರಹ್ಮತಂತ್ರ ಪರಕಾಲ ಮಹಾದೇಶಿಕನ್‌ರವರು ಶ್ರೀ ಲಕ್ಷ್ಮೀಹಯಗ್ರೀವನ ದಿವ್ಯಾಸ್ಥಾನವನ್ನು ಅಲಂಕರಿಸಿದ್ದಾಗ ಅವರ ದಿವ್ಯ ಕಟಾಕ್ಷಕ್ಕೆ ದಾಸನು ಪರಿಪೂರ್ಣ ಪಾತ್ರನಾಗಿ, ಹತ್ತಾರು ವರ್ಷ ಶ್ರೀ ಹಯಗ್ರೀವನ ಸನ್ನಿಧಿಯಲ್ಲಿ ವೇದ ಪ್ರಬಂಧಾಧ್ಯಯನ ಮಾಡಿ ಹಯಗ್ರೀವನ ಕೃಪಾಕಟಾಕ್ಷಕ್ಕೆ ಪಾತ್ರನಾದವನು

"ಅರಿಯಾಕ್ಕಾಲತ್ತುಳ್ಳೇ ಅಡಿಮೈಕ್ಕಣ್ ಅನ್ಬುಶೆಯ್‌ವಿತ್ತು ಅರಿಯಾ ಮಾಮಾಯಡಿತ್ತಯೇನ್ನೈ ವೈತ್ತಾಯಾಲ್" ಎಂಬಂತೆ ಬಾಲ್ಯದಲ್ಲಿಯೇ ಶ್ರೀಮದ್ವೇದಮಾರ್ಗ ಪ್ರತಿಷ್ಠಾಪನಾಚಾರ್ಯ ಸರ್ವತಂತ್ರ ಸ್ವತಂತ್ರೋಭಯ ವೇದಾಂತಾಚಾರ್ಯ ಭಗವದ್ರಾಮಾನುಜ ಸಿದ್ಧಾಂತ ನಿರ್ಧಾರಣ ಸಾರ್ವಭೌಮರಾದ **ಗೋಷ್ಠೀಪುರಂ ಸುಂದರ ಸೌಮ್ಯ ನಾರಾಯಣಾರ್ಯ ಮಹಾದೇಶಿಕನ್‌ರವರ** ದಿವ್ಯಕಟಾಕ್ಷಕ್ಕೆ ಪಾತ್ರನಾಗಿ ಅವರಿಂದ ಚಕ್ರಾಂಕಿತನಾಗಿ ರಹಸ್ಯ ಮಂತ್ರೋಪದೇಶವನ್ನು ಸಾರ್ಥ**ವಾಗಿ** ಪಡೆದು, ಅವರ ಪಾದಪದ್ಮದಲ್ಲಿಯೇ ಆತ್ಮ ರಕ್ಷಾಭರಸಮರ್ಪಣವನ್ನು ಮಾಡ್ಡಿ ಕೃತಾರ್ಥನಾದವನು **ಈ ಚೇತನನು.** ಆ ಆಚಾರ್ಯರವರ್ಯರ ಪರಮಾನುಗ್ರಹಕ್ಕೆ ಪಾತ್ರರಾಗಿ ಗ್ರಂಥ ಚತುಷ್ಟಯಗಳನ್ನೂ ಅವರ ಪಾದ ಪದ್ಮಗಳಲ್ಲಿಯೇ ಅಧಿಕರಿಸಿ, ಆತ್ಮರಕ್ಷಾಭರವನ್ನೂ ಆಪಾದಪದ್ಮಗಳಲ್ಲಿಯೇ ಸಮರ್ಪಿಸಿ ಧನ್ಯಧನ್ಯರಾದ, ನಮ್ಮ ಪೂಜ್ಯ ಪಿತೃವರ್ಯರಾದ **ಸರಗೂರು ಮಾಡಭೂಷಣಂ ಶ್ರೀನಿವಾಸ ಗೋಪಾಲಾಚಾರ್ಯ ಮಹಾದೇಶಿಕನ್‌ರವರ** ಪಾದಪದ್ಮಗಳ ಸೇವಾಸಮಧಿಗತ ಸಕಲವೇದಾಂತಾರ್ಥಗಳನ್ನುಳ್ಳವನು ಈ ದಾಸನು. ಹಾಗೆಯೇ ಶ್ರೀ ಉಧ ವೇ ಪುತ್ತಂಕೋಟ್ಟಕಂ ಶ್ರೀನಿವಾಸಾಚಾರ್ಯ ಮಹಾದೇಶಿಕರಲ್ಲಿಯೂ ಮಧುರಾಂತಕ ವೀರರಾಘವಾಚಾರ್ಯ ಮಹಾದೇಶಿಕರಲ್ಲಿಯೂ ಈಗ ಲಕ್ಷ್ಮೀನೃಸಿಂಹಾಸ್ಥಾನವನ್ನಲಂಕರಿಸಿರುವ ಶ್ರೀ ಮತ್ಪರಮಹಂಸೇತ್ಯಾದಿ ವೇದಾಂತ ದೇಶಿಕ ಯತೀಂದ್ರ ಮಹಾದೇಶಿಕನ್‌ರವರಲ್ಲಿಯೂ ವೇದಾಂತ ಗ್ರಂಥಗಳ ಪರಿಚಯವನ್ನು ಮಾಡಿದ ಭಾಗ್ಯವಿದೆ.

ಹೀಗೆ ಆಚಾರ್ಯರುಗಳು ಪರಮಾನುಗ್ರಹಗಳಿಂದ ಲಭಿಸಿದ ಸಂಪ್ರದಾಯಾರ್ಥಗಳನ್ನೂ ಪೂರ್ವಾಚಾರ್ಯರುಗಳ ವ್ಯಾಖ್ಯಾನಗಳನ್ನೂ ಮುಖ್ಯವಾಗಿ ಇಂಜಿಮೇಡು ಅಳಗಿಯ ಶಿಂಗರ್ ಅನುಗ್ರಹಿಸಿದ ಸಾರಬೋಧಿನಿ ಮತ್ತು ಕರೂರು ಸ್ವಾಮಿಗಳೆಂದು ಜಗದ್ವಿಖ್ಯಾತರಾದ ರಂಗರಾಮಾನುಜ ಮುನಿವರು ಅನುಗ್ರಹಿಸಿದ "ಸಾರತಾತ್ಪರ್ಯ ಕೌಮುದಿ" ಎಂಬ ವ್ಯಾಖ್ಯಾನವನ್ನೂ ಅವಲಂಬಿಸಿ ದಾಸನು ಈ ಗ್ರಂಥರತ್ನಕ್ಕೆ ಕನ್ನಡದಲ್ಲಿ ವ್ಯಾಖ್ಯಾನವನ್ನು ಬರೆದಿರುತ್ತೇನೆ. ಇದರಲ್ಲಿ ಗುಣ ಭಾಗಗಳು ಆಚಾರ್ಯಾನುಗ್ರಹದಿಂದ ಲಭಿಸಿದುವು. ದೋಷಗಳಿದ್ದರೆ ಅದು ದಾಸನದು. ಪಂಡಿತರು ಆ ದೋಷಗಳನ್ನು ಎತ್ತಿತೋರಿಸಿ ಉಪಕರಿಸಿದರೆ ದಾಸನು ಕೃತಾರ್ಥನಾಗುತ್ತೇನೆ ಮುಂದಿನ ಗ್ರಂಥಗಳಲ್ಲಿ ಅವುಗಳನ್ನು ಸರಿಪಡಿಸಿಕೊಳ್ಳಲು ಸದವಕಾಶವು ಲಭಿಸುತ್ತದೆ.

ಈ ವ್ಯಾಖ್ಯಾನವು ಆಚಾರ್ಯರ ತಮಿಳ್ ಶ್ರೀ ಸೂಕ್ತಿಗೆ ಕನ್ನಡದಲ್ಲಿ ಅರ್ಥಪರಿವರ್ತನಾತ್ಮಕವಾಗಿ ಬರೆಯಲ್ಪಟ್ಟಿದೆ ಅಲ್ಲಲ್ಲೇ ಮೂಲ ಶ್ರೀ ಸೂಕ್ತಿಯನ್ನು ಪ್ರತೀಕವಾಗಿ ಎತ್ತಿ ಅರ್ಥವನ್ನು ಬರೆದಿರುವುದರಿಂದ ಯಾವ ಪಂಕ್ತಿಗೆ ಯಾವುದು ಅರ್ಥವೆಂಬುದು ತಿಳಿಯುತ್ತದೆ. ಕ್ಲಿಷ್ಟಪದಗಳಿಗೆ ಅರ್ಥವೂ ಬರೆಯಲ್ಪಟ್ಟಿದೆ. ಅಲ್ಲಲ್ಲೇ ಶ್ರೀ ಸೂಕ್ತಿಗಳಿಗೆ ಭಾವಾರ್ಥಗಳೂ, ಬರೆಯಲ್ಪಟ್ಟಿವೆ ಪ್ರತಿ ಅಧಿಕಾರದಲ್ಲಿಯೂ ಆಚಾರ್ಯರು ಅನುಗ್ರಹಿಸಿರುವ ವಿಷಯಗಳಿಗೆ ಶೀರ್ಷಿಕೆಯನ್ನಿಟ್ಟು ಸಂಗತಿಗಳನ್ನು ಬರೆದಿರುವುದರಿಂದ ವಾಚಕರಿಗೆ ವಿಷಯಗಳು ಸುಲಭವಾಗಿ ಮನದಟ್ಟಾಗುವುವೆಂಬುದು ದಾಸನ ಅಭಿಪ್ರಾಯ. ಮತ್ತೊಂದು ಪ್ರಧಾನ ವಿಷಯ. ಕೆಲವೆಡೆಗಳಲ್ಲಿ ಶ್ರೀ ದೇಶಿಕರ ವಾಕ್ಯಗಳು ಬಹಳ ವಿಸ್ತಾರವಾಗಿವೆ. ವ್ಯಾಖ್ಯಾನದಲ್ಲಿ ಅವುಗಳನ್ನು ಮಧ್ಯೆ ಮಧ್ಯೆ ಕ್ರಿಯಾಪದಗಳನ್ನು ಸೇರಿಸಿ ಚಿಕ್ಕ ಚಿಕ್ಕ ವಾಕ್ಯಗಳಾಗಿ ಬರೆದಿರುತ್ತೇನೆ. ಹಾಗೆ ಬರೆಯುವಾಗ ಮೂಲ ಗ್ರಂಥದ ಪದಕ್ಕೆ ಉದಾಹರಣೆ, "ನಿರ್ಕ" ಎಂಬುದಕ್ಕೆ "ನಿಂತಿರುತ್ತಾನೆ" ಎಂದು ಅರ್ಥಮಾಡಿ ವಾಕ್ಯವನ್ನು ಮುಗಿಸಿದ್ದೇನೆ ಇದನ್ನು ಸಹೃದಯರು ಸರಿಯಾದ ಭಾವನೆಯಿಂದ ತಿಳಿದುಕೊಂಡು ಓದಬೇಕಾಗಿ ಪ್ರಾರ್ಥನೆ.

ಈ ಗ್ರಂಥದ ಮೊದಲೆರಡು ಭಾಗಗಳನ್ನು ಅಚ್ಚಿಡಲು ಶ್ರೀ ಶ್ರೀಮದಭಿನವ ರಾಮಾನುಜ ಬ್ರಹ್ಮತಂತ್ರ ಪರಕಾಲ ಮಹಾದೇಶಿಕನ್‌ರವರ ಆರ್ಥಿಕ ಸಹಾಯವು ಬಹಳ ನೆರವಾಗಿದೆ. ಹಾಗೆಯೇ ಸರಗೂರು ಸನಾತನ ಧರ್ಮ ಸಭೆಯವರೂ, ಪ್ರಕಾಶನಗರ ಶ್ರೀ ವೈಷ್ಣವ ಸಭೆಯವರೂ, T.T D. ದೇವಸ್ಥಾನದ ಅಧಿಕಾರಿಗಳೂ ಧನಸಹಾಯ ಮಾಡಿ ಬಹಳ ಉಪಕರಿಸಿದ್ದಾರೆ. ಇವರುಗಳಿಗೆಲ್ಲಾ ದಾಸನು ಕೈಜೋಡಿಸಿ ನಮಸ್ಕರಿಸಿ ಕೃತಜ್ಞತೆಯನ್ನು ವ್ಯಕ್ತಪಡಿಸಿಕೊಳ್ಳುತ್ತೇನೆ. ಇನ್ನೂ ಕೆಲವರು ಮುಂದಾಗಿಯೇ ಶ್ರೀ ಕೋಶಕ್ಕೆ ಒಂದೊಂದು ಪ್ರತಿಗೆ ಸಹಾಯ ಮಾಡಿರುತ್ತಾರೆ. ಅವರುಗಳಿಗೂ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

ಹೀಗೆಯೇ ಇನ್ನೂ ಇತರ ಆಸ್ತಿಕ ಸಂಸ್ಥೆಯರೂ, ದಾನಿಗಳೂ ಮುಂದೆ ಬಂದು ಸಹಾಯ ಮಾಡಿದರೆ ಉಳಿದ ಭಾಗಗಳೂ ಶೀಘ್ರದಲ್ಲೇ ಅಚ್ಚಾಗಲು ಉಪಕಾರವಾಗುತ್ತದೆ.

ಈ ಶ್ರೀ ಕೋಶದ ಮಾತೃಕೆಯನ್ನು ಶೋಧಿಸಿ ಕೊಡಲು ಮತ್ತು ಇತರ ಸಹಾಯಗಳನ್ನು ನೀಡಿ ದೇಹಧಾರಣ ನಿಮಿತ್ತ ಅಂತರ್ಯಾಮ್ಯಾರಾಧನವನ್ನೂ ನಿರ್ವಹಿಸಿ ಬಂದು ದಾಸನ ಸಹ ಧರ್ಮಚಾರಿಣಿಯೂ ಬಹಳ ಉಪಕರಿಸಿದ್ದಾಳೆ. ಇವಳಿಗೆ ಆಚಾರ್ಯರುಗಳ ಕಟಾಕ್ಷವು ಪರಿಪೂರ್ಣವಾಗಿದ್ದು, ದೀರ್ಘಸೌಮಂಗಲ್ಯಾದಿ ಸರ್ವಮಂಗಳಗಳನ್ನೂ ಆಚಾರ್ಯರುಗಳೂ ದಿವ್ಯದಂಪತಿಗಳೂ ಅನುಗ್ರಹಿಸಲೆಂದು ಹಾರೈಸುತ್ತೇನೆ

ಈ ಗ್ರಂಥವನ್ನು ಅಂದವಾಗಿ ಅಚ್ಚಿಟ್ಟ 'ಅವಿನಾಶ್ ಪ್ರಿಂಟರ್ಸ್' ಅವರಿಗೂ ನಮ್ಮ ಅನಂತ ಧನ್ಯವಾದಗಳು. ಗ್ರಂಥದಲ್ಲಿರುವ ಅಕ್ಷರಸ್ಖಾಲಿತ್ಯಗಳನ್ನು ಪಂಡಿತರು ತಿದ್ದಿಕೊಂಡು ಓದಬೇಕಾಗಿ ಪ್ರಾರ್ಥನೆ.

ಈ ಗ್ರಂಥವನ್ನು ಪರಾಮರ್ಶಿಸಿ ಇದಕ್ಕೆ "ಪ್ರಸ್ತಾವನೆ"ಯನ್ನು ಅನುಗ್ರಹಿಸಿದ ಶ್ರೀ ಉಭ. ಪರಮಹಂಸ ಶ್ರೀಮದಭಿನವ ರಾಮಾನುಜ ಬ್ರಹ್ಮತಂತ್ರ ಪರಕಾಲ ಮಹಾದೇಶಿಕನ್‌ರವರಿಗೂ, ಅವರ ನಿಯಮನವನ್ನು ಶಿರಸಾವಹಿಸಿ ಬರೆದುಕೊಟ್ಟ ಆಸ್ಥಾನ ವಿದ್ವಾನ್ ಪಂಡಿತ ಮಣಿ ವ್ಯಾಕರಣ ವಿದ್ವಾನ್ ಸ. ಮಾ ಶ್ರೀನಿವಾಸ ವರದಾಚಾರ್ಯ ಸ್ವಾಮಿಗಳಿಗೂ ನಮ್ಮ ಅನಂತ ಪ್ರಣಾಮಗಳು. ಹಾಗೆಯೇ ಈ ಗ್ರಂಥವನ್ನು ಆಮೂಲಾಗ್ರವಾಗಿ ಅವಲೋಕನೆ ಮಾಡಿ 'ಅಭಿನಂದನ' ಶ್ರೀಮುಖಗಳನ್ನು ಅನುಗ್ರಹಿಸಿದ ಶ್ರೀ ಉಭ. ಪ್ರೊಫೆಸರ್ ನಾರಾಯಣಾಚಾರ್ಯ ಸ್ವಾಮಿಗಳವರಿಗೂ, ಶ್ರೀ ಉಭ ವೇ. ಡಾ|| ಎನ್ ಎಸ್ ಅನಂತರಂಗಾಚಾರ್ಯರವರಿಗೂ ದಾಸನ ಕೃತಜ್ಞತಾ ಪೂರ್ವಗಳಾದ ಅನಂತ ಪ್ರಣಾಮಗಳು

'ಕಲೌಖಲುಭವಿಷ್ಯಂತಿ ನಾರಾಯಣ ಪರಾಯಣಾಃ, ಎಂದು ಈ ಕಲಿಯುಗದಲ್ಲಿಯೂ ನಾರಾಯಣ ಪರಾಯಣರು ಅಲ್ಲಲ್ಲೇ ಅವತರಿಸಿದ್ದಾರೆ ಅವರುಗಳು ಈ ಗ್ರಂಥವನ್ನು ಆದರದಿಂದ ಓದಿ ತಮ್ಮ ಶಿಷ್ಯ ಪುತ್ರಾದಿಗಳಿಗೆ ಹೇಳಿಕೊಟ್ಟು ತನ್ಮೂಲಕ ಜ್ಞಾನಪರಂಪರೆಯನ್ನು ಲೋಕದಲ್ಲಿ ಅಭಿವೃದ್ಧಿಗೊಳಿಸಿದರೆ ಭಗವಂತನ ಚೇತನೋದ್ಧಾರಣ ಕೃತ್ಯವು ದಾಸನ ಮೂಲಕ ನಡೆಸಿದುದು ಸಫಲವಾಗುತ್ತದೆ.

ದೇಶಿಕೋ ನಿಗಮಾಂತಾರ್ಯಾತ್ ತದ್ವಕ್ತ್ರಾತ್ ಸಾತ್ವಿಕೋಜನಃ |
ತತ್ಪ್ರಬಂಧಾತ್ ಪ್ರಬಂಧೋಽನ್ಯೋ ನಾಸ್ತಿನಾಸ್ತಿ ಮಹೀತಲೇ ||
ಯತ್ಪದಾಂಭೋರುಹಧ್ಯಾನ ವಿಧ್ವಸ್ತಾಶೇಷಕಲ್ಮಷಃ |
ವಸ್ತುತಾಮುಪಯಾತೋಽಹಂ ಸೌಮ್ಯನಾರಾಯಣಂ ಭಜೇ ||

ಆಚಾರ್ಯಪದರೇಣುಃ

ಪ್ರಮೋದಸಂ ಮೇಷಮಾಸ ಆರಿದ್ರಾ

**ಸ. ಮಾ. ಕೃಷ್ಣಮಾಚಾರ್ಯದಾಸಃ**



ಶ್ರೀಃ

ಶ್ರೀ ಲಕ್ಷ್ಮೀನೃಸಿಂಹ ಪರಬ್ರಹ್ಮಣೇ ನಮಃ
ಶ್ರೀ ಶಠಗೋಪನಾಥ ಯಾಮುನ ಭಗವದ್ರಾಮಾನಜ ನಿಗಮಾಂತ ಮಹಾದೇಶಿಕೇಭ್ಯೋ ನಮಃ
ಅಸ್ಮದ್ಗುರು ಪರಂಪರಾಭ್ಯೋ ನಮಃ



# ಸಮರ್ಪಣಮ್

ಶ್ರೀಮದ್ವೇದಮಾರ್ಗ ಪ್ರತಿಷ್ಠಾಪನಾಚಾರ್ಯ, ಸರ್ವತಂತ್ರ ಸ್ವತಂತ್ರೋಭಯವೇದಾಂತಾಚಾರ್ಯ,
ಭಗವದ್ರಾಮಾನುಜ ಸಿದ್ಧಾಂತ ನಿರ್ಧಾರಣ ಸಾರ್ವಭೌಮ, ದೇಶಿಕದರ್ಶನ ವಿಜಯ ಧ್ವಜ

**ಶ್ರೀ ಸುಂದರಸೌಮ್ಯ ನಾರಾಯಣಾರ್ಯ ಮಹಾದೇಶಿಕ**

ಶ್ರೀಪಾದಪದ್ಮ ಸೇವಾಸಮಧಿಗತೋಭಯವೇದಾಂತಜ್ಞಾನ ವೈರಾಗ್ಯಾನುಷ್ಠಾನವತಾಂ

**ಶ್ರೀಮತಾಂ ಶ್ರೀನಿವಾಸಗೋಪಾಲಾರ್ಯ ಮಹಾದೇಶಿಕಾನಾಂ**

ಶ್ರೀಪಾದಪದ್ಮಯೋಃ ತತ್ತನೂಜೇನ ಸ. ಮಾ. ಕೃಷ್ಣದಾಸೇನ ಸಾದರಂ ಸಭಕ್ತಿಶ್ರದ್ಧಂ ಸಮರ್ಪಿತಮಿದಂ

**ಸವ್ಯಾಖ್ಯಾನಂ ಶ್ರೀಮದ್ರಹಸ್ಯತ್ರಯಸಾರ** ಶ್ರೀ ಕೋಶಂ, ವಿಜಯತೇತಮಾಮ್

ಪ್ರಮೋದೂತ ಮೇಷ ಶುಕ್ಲ ಆರಿದ್ರಾ
29-4-1990

ಶ್ರೀಮತೇ ಹಯಗ್ರೀವಾಯನಮಃ
ಶ್ರೀಮತೇ ಶಠಗೋಪಾಯನಮಃ
ಶ್ರೀಮತೇ ರಾಮಾನುಜಾಯ ನಮಃ
ಶ್ರೀಮತೇ ನಿಗಮಾಂತಮಹಾದೇಶಿಕಾಯನಮಃ



# ಶ್ರೀಮದ್ರಹಸ್ಯತ್ರಯಸಾರಃ

ವೇದಾಪಹಾರ ಪರಿತಪ್ತ ಚತುರ್ಮುಖೇನ
ಸಂಪ್ರಾರ್ಥಿತೋಹಯಮುಖೇನ ವಿಶುದ್ಧ ವೇದಾನ್ ।
ಪ್ರೋವಾಚಯಃ ಪ್ರಥಮತಃ ಕಮಲಾಸನಾಯ
ಆದ್ಯೋಗುರುರ್ವಿಜಯತೇ ಸ ರಮಾಹಯಾಸ್ಯಃ ॥

ಸಂಸಾರ ಸಾಗರ ನಿಮಗ್ನ ಸಮಸ್ತಜಂತು
ಸಂರಕ್ಷಣಾಯ ನಿಗಮಾಂತ ಗುರುರ್ದಯಾಲುಃ ।
ಮಂತ್ರತ್ರಯಾರ್ಥ ವಿವೃತಿಂ ವಿರಚಯ್ಯನಾವಂ
ಸಂರಕ್ಷತಿಸ್ಮ ಹೃದಯೋಜ್ವಲ ವಾಜಿವಕ್ತ್ರಃ ॥

ನಿಗಮಾಂತ ಗುರುಂ ವಂದೇ ಭವಸಾಗರ ತಾರಕಮ್ ।
ರಹಸ್ಯತ್ರಯ ಸಾರಾಖ್ಯ ಗ್ರಂಥರತ್ನೇನ ದೇಹಿನಾಮ್ ॥

ದೇಶಿಕೋನಿಗಮಾಂತಾರ್ಯಾತ್ ತದ್ಭಕ್ತಾತ್ ಸಾತ್ತ್ವಿಕೋಜನಃ ।
ತತ್ಪ್ರಬಂಧಾತ್ ಪ್ರಬಂಧೋನ್ಯೋ ನಾಸ್ತಿ ನಾಸ್ತಿಮಹೀತಲೇ ॥

ವಿಗಾಹೇನಿಗಮಾಂತಾರ್ಯ ವಿಷ್ಣುಪಾದ ಸಮುದ್ಭವಮ್ ।
ರಹಸ್ಯತ್ರಯ ಸಾರಾಖ್ಯಂ ತ್ರಿಸ್ರೋತಸಮಕಲ್ಮಷಮ್ ॥

ಅವಿಜ್ಞಾತಂ ವಿಜಾನತಾಂ ವಿಜ್ಞಾತಮವಿಜಾನತಾಮ್ ।
ರಹಸ್ಯತ್ರಯಸಾರಾಖ್ಯಂ ಪರಂಬ್ರಹ್ಮಾಸ್ತು ಮೇಹೃದಿ ॥

---

ಶ್ರೀಃ

**ಶ್ರೀಮತೇ ಹಯಗ್ರೀವಾಯ ನಮಃ ।**
**ಶ್ರೀಮತೆ ಲಕ್ಷ್ಮೀನೃಸಿಂಹಪರಬ್ರಹ್ಮಣೇ ನಮಃ**
**ಶ್ರೀಮತೇ ಶಠಗೋಪಾಯನಮಃ ।**
**ಶ್ರೀಮತೇ ರಾಮಾನುಜಾಯನಮಃ**
**ಶ್ರೀಮತೇ ನಿಗಮಾಂತ ಮಹಾದೇಶಿಕಾಯನಮಃ ।**
**ಅಸ್ಮದ್ಗುರು ಪರಂಪರಾಯೈ ನಮಃ**



ಕುಮಾರನಯಿನಾರಾಚಾರ್ಯರು ಕೃಪೆ ಮಾಡಿದುದು.

ಶ್ರೀಮಾನ್ ವೇಂಕಟನಾಥಾರ್ಯಃ ಕವಿತಾರ್ಕಿಕ ಕೇಸರೀ ।
ವೇದಾಂತಾಚಾರ್ಯವರ್ಯೋಮೇ ಸನ್ನಿಧತ್ತಾಂ ಸದಾಹೃದಿ ॥

ಬ್ರಹ್ಮತಂತ್ರ ಸ್ವತಂತ್ರಸ್ವಾಮಿಗಳು ಕೃಪೆಮಾಡಿದುದು.

ರಾಮಾನುಜ ದಯಾಪಾತ್ರಂ ಜ್ಞಾನ ವೈರಾಗ್ಯ ಭೂಷಣಮ್ ।
ಶ್ರೀಮದ್ವೇಂಕಟನಾಥಾರ್ಯಂವಂದೇ ವೇದಾಂತ ದೇಶಿಕಮ್ ॥

ಪಿಳ್ಳೈ ಲೋಕಾಚಾರಿಯರ್ ಕೃಪೆಮಾಡಿದುದು.

ಶೀರೊನ್ರು ತೂಪ್ಪುಲ್ ತಿರುವೇಂಗಡಮುಡೈಯಾನ್
ಪಾರೊನ್ರಚ್ಚೊನ್ನ ಪಙ್ಱಮೊೞಿಯುಳ್ – ಓರೊನ್ರು
ತಾನೇ ಅಮೈಯಾದೋ ತಾರಣಿಯಿಲ್ ವಾೞ್ವಾರ್ಕ್ಕು
ವಾನೇರಪ್ಪೋಮಳವುಮ್ ವಾೞ್ವು.

## ಶ್ರೀ ಗುರು ಪರಂಪರಾ ಸಾರಃ

**ಗುರುಭ್ಯಸ್ತದ್ಗುರುಭ್ಯಶ್ಚ ನಮೋವಾಕಮಧೀಮಹೇ ।**
**ವೃಣೀಮಹೇಚತತ್ರಾದ್ಯೌ ದಂಪತೀ ಜಗತಾಂಪತೀ ॥**

---

ಶ್ರೀಮತೇ ಹಯಗ್ರೀವಾಯನಮಃ । ಶ್ರೀಮತೇ ಲಕ್ಷ್ಮೀನೃಸಿಂಹ ಪರಬ್ರಹ್ಮಣೇ ನಮಃ ।
ಶ್ರೀಮತೇ ಶಠಗೋಪಾಯ ನಮಃ । ಶ್ರೀಮತೇ ರಾಮಾನುಜಾಯ ನಮಃ ।
ಶ್ರೀ ಮತೇ ನಿಗಮಾಂತ ಮಹಾದೇಶಿಕಾಯ ನಮಃ । ಶ್ರೀಮತೇ ಶ್ರೀ ಸುಂದರಸೌಮ್ಯನಾರಾಯಣಾರ್ಯ
ಮಹಾದೇಶಿಕಾಯ ನಮಃ । ಶ್ರೀಮತೇ ಶ್ರೀನಿವಾಸಗೋಪಾಲಾರ್ಯಾಯ ಮಹಾದೇಶಿಕಾಯನಮಃ ।
ಅಸ್ಮದ್ಗುರು ಪರಂಪರಾಯೈ ನಮಃ ।

( ಸಾರ ಚಂದ್ರಿಕಾ ವಾಖ್ಯಾ )

**ಉಪೋದ್ಘಾತಃ** – ಶ್ರಿಯಃ ಪತಿಯೂ, ಪರಮಕಾರುಣಿಕನೂ, ಅವಾಪ್ತ ಸಮಸ್ತಕಾಮನೂ, ಆದ ಸರ್ವೇಶ್ವರನು, ಸಂಸಾರದಲ್ಲಿ ಮುಳುಗಿ ಏಳುತ್ತಿರುವ ಜೀವರಾಶಿಗಳನ್ನು ಶಾಸ್ತ್ರವೆಂಬ ಕೈದೀಪವನ್ನು ತೋರಿಸಿ ಉದ್ಧರಿ

ಸಲು, ವೇದ, ಇತಿಹಾಸ ಪುರಾಣಗಳನ್ನು ತಾನೇ ಸಾಕ್ಷಾತ್ತಾಗಿ ಬ್ರಹ್ಮದೇವನಿಗೆಉಪದೇಶಿಸಿ, ಅವನಿಂದ ನಾರದ ವಾಲ್ಮೀಕಿ ಪರಾಶರ ಶುಕ ಶೌನಕಾದಿಗಳಿಗೆ ಉಪದೇಶಿಸಿ ತನ್ಮೂಲಕ ಗ್ರಂಥರೂಪವಾಗಿಯೂ, ಸಾಕ್ಷಾತ್ತಾಗಿಯೂ ಪ್ರಪಂಚಕ್ಕೆ ಉಪದೇಶಿಸಿರುತ್ತಾನೆ. ಆ ಶ್ರಿಯಃ ಪತಿಯಾದ ಸರ್ವೇಶ್ವರನೇ, ಶ್ರೀನಿವಾಸನಾಗಿ ವೆಂಕಟಾದ್ರಿಯಲ್ಲಿ ಅರ್ಚಾರೂಪಿಯಾಗಿ ಸಾನ್ನಿಧ್ಯ ಮಾಡಿಕೊಂಡು, ಭಕ್ತಾಭೀಷ್ಟವರಪ್ರದನಾಗಿರುತ್ತಾನೆ. ಈ ಕಲಿಯುಗದಲ್ಲಿ ಅವನೇ ತನ್ನ ಘಂಟೆಯ ರೂಪದಲ್ಲಿ **ಶ್ರೀಮನ್ನಿಗಮಾಂತ ಮಹಾದೇಶಿಕರಾಗಿ** ಅವತಾರ ಮಾಡಿ, ನಮ್ಮಾಳ್ವಾರ್, ನಾಥಮುನಿಗಳು, ಆಳವಂದಾರ್, ಶ್ರೀ ಭಗವದ್ರಾಮಾನುಜರೇ ಮೊದಲಾದ ಪರಮಾಚಾರ್ಯರುಗಳು ಉಪದೇಶಿಸಿದ ಸತ್ಸಂಪ್ರದಾಯಾಗತ ಸಮೀಚೀನ ಶಾಸ್ತ್ರಾರ್ಥಗಳನ್ನು ಪರಶ್ಶತಗ್ರಂಥಗಳ ಮೂಲಕ, ಲೋಕಕ್ಕೆ ಉಪದೇಶಿಸಿ ಉಪಕರಿಸಿದ್ದಾನೆ. ಹಾಗೆಯೇ ಈ ಆಚಾರ್ಯರ ಮೂಲಕ ತಮ್ಮ ಅವತಾರದ ಪರಮ ಪ್ರಯೋಜನವಾದ **"ಶ್ರೀ ಮದ್ರಹಸ್ಯತ್ರಯ ಸಾರ"** ವೆಂಬ ಗ್ರಂಥ ರತ್ನವನ್ನು, ಅನುಗ್ರಹಿಸಿ ಉಪಕರಿಸಿದ್ದಾನೆ. ಈ ಗ್ರಂಥರತ್ನದಲ್ಲಿ ತತ್ತ್ವ, ಹಿತ, ಪುರುಷಾರ್ಥಗಳನ್ನು ಯಥಾಶಾಸ್ತ್ರ ಯಥಾ ಸಂಪ್ರದಾಯ, ಪ್ರಮಾಣಪೂರ್ವಕವಾಗಿ, ಈ ಆಚಾರ್ಯರು ನಿರೂಪಿಸಿರುತ್ತಾರೆ. ಮುಖ್ಯವಾಗಿ ಪ್ರಪತ್ತಿಶಾಸ್ತ್ರ ವೆಂಬ ಸುಲಭವಾದ ಮೋಕ್ಷೋಪಾಯವನ್ನು ಆಕ್ಷೇಪ ಸಮಾಧಾನಗಳೊಡನೆ ನಿರೂಪಿಸಿ ಸರ್ವರೂ ಅಧ್ಯಯನಮಾಡಿ ಉಪಾಯವನ್ನು ಅನುಷ್ಠಿಸಿ ಸಂಸಾರದಿಂದ ಬಿಡುಗಡೆ ಹೊಂದಿ ಭಗವದನುಭವರೂಪವಾದ ಆನಂದವನ್ನು ಪಡೆಯಲಿ ಎಂದು ಪರಮಕೃಪೆಯಿಂದ ಅನುಗ್ರಹಿಸಿರುತ್ತಾರೆ. ಮಹಾಭಾರತದ ವಿಷಯವಾಗಿ ಪೂರ್ವರು **"ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿನತತ್ಕ್ವಚಿತ್"** (ಇದರಲ್ಲಿ ಹೇಳಿರುವ ವಿಷಯಗಳೇ ಬಾಕಿ ಪುರಾಣೇತಿಹಾಸಗಳಲ್ಲಿ ಹೇಳಲ್ಪಟ್ಟಿವೆ. ಇಲ್ಲಿ ಹೇಳದ ವಿಷಯಗಳನ್ನು ಬೇರೆಲ್ಲಿಯೂ ಹೇಳಿಲ್ಲ. ಅದಾಗಿ ಸಕಲ ಶಾಸ್ತ್ರಾರ್ಥಗಳೂ ಇಲ್ಲಿ ಅಡಗಿವೆ) ಎಂದು ಹೇಳಿರುವ ನ್ಯಾಯದಂತೆ, **ಶ್ರೀಮದ್ರಹಸ್ಯತ್ರಯ ಸಾರದಲ್ಲಿ** ಸಕಲ ವೇದಾಂತಾರ್ಥಗಳನ್ನು ಆಚಾರ್ಯವರ್ಯರು ಅನುಗ್ರಹಿಸಿರುತ್ತಾರೆ. ಇದನ್ನು ಅಧ್ಯಯನ ಮಾಡಿದರೆ ಸಕಲ ವೇದಾಂತಾರ್ಥಗಳೂ ಸುಲಭವಾಗಿ ತಿಳಿಯುತ್ತವೆ.

ಈ **ಶ್ರೀ ಮದ್ರಹಸ್ಯತ್ರಯ ಸಾರಕ್ಕೆ** ಸೇರಿದ ಹಾಗೆ **"ಗುರುಪರಂಪರಾ ಸಾರ** ವೆಂಬ ಗ್ರಂಥವನ್ನು ಆಚಾರ್ಯರು ರಚಿಸಿದ್ದಾರೆ. ಇದು ಪ್ರತ್ಯೇಕವಾದ ಗ್ರಂಥವಾದರೂ, ಶ್ರೀಮದ್ರಹಸ್ಯತ್ರಯ ಸಾರಕ್ಕೆ ಸೇರಿಸಿಕೊಂಡೇ ಇದನ್ನು ಆರಂಭದಲ್ಲಿ ಕಾಲಕ್ಷೇಪ ಮಾಡುವುದು ಸಂಪ್ರದಾಯ.

**ಗುರುಪರಂಪರಾಭಜನ**

ಪ್ರಾರೀಪ್ಸಿತಗ್ರಂಥವು ನಿರ್ವಿಘ್ನವಾಗಿ ಪರಿಸಮಾಪ್ತಿಯನ್ನು ಹೊಂದಲಿ, ಹಾಗೆಯೇ ಭಗವತ್ಪ್ರಾಪ್ತಿ ರೂಪವಾದ ಮಹಿಷ್ಟಮಂಗಳವು ಸಿದ್ಧಿಸಲಿ, ಎಂದು ಗುರುಪರಂಪರಾ ಪೂರ್ವಕ ಭಗವನ್ನಮಸ್ಕಾರವನ್ನು ಮೊಟ್ಟ ಮೊದಲು ತಮ್ಮ ಗ್ರಂಥದಲ್ಲಿ **"ಗುರುಭ್ಯಃ"** ಎಂದಾರಂಭಿಸಿ, ಆಚಾರ್ಯರು ನಿಬಂಧಿಸಿರುತ್ತಾರೆ.

**ಮಂಗಳಾಚಾರಯುಕ್ತಾನಾಂ ನಿತ್ಯಂ ಚಪ್ರಯತಾತ್ಮನಾಮ್ ।**
**ಜಪತಾಂಜುಹ್ವತಾಂಚೈವ ವಿನಿಪಾತೋನ ವಿದ್ಯತೇ ॥**

ಎಂಬುದು ಸ್ಮೃತಿವಚನ. ಅಂದರೆ ಮಂಗಳಕರವಾದ ಗುರುದೇವತಾ ನಮಸ್ಕಾರರೂಪವಾದ ಆಚಾರ ವುಳ್ಳವರೂ, ನಿತ್ಯವೂ ಜಪಹೋಮಾದಿಗಳನ್ನು ಮಾಡುತ್ತಾ ಶುದ್ಧರೂ ಆಗಿರುವವರಿಗೆ ಅನಿಷ್ಟವು ಉಂಟಾಗುವುದಿಲ್ಲ. ಈ ಶಾಸ್ತ್ರಾರ್ಥವನ್ನು ಅನುಸರಿಸಿ ಆಚಾರ್ಯವರ್ಯರು ಗುರುದೇವತಾತ್ಮಕವಾದ ನಮಸ್ಕಾರವನ್ನು ಮೊಟ್ಟಮೊದಲು ಅನುಷ್ಠಿಸುತ್ತಿದ್ದಾರೆ.

**ಗುರುಭ್ಯ ಇತ್ಯಾದಿ :** ತಮಗೆ ವೇದಾಂತ ಕಾಲಕ್ಷೇಪವನ್ನೂ ಪ್ರಪತ್ತಿರೂಪವಾದ ಬ್ರಹ್ಮವಿದ್ಯೆಯನ್ನೂ ಉಪದೇಶಿಸಿದ ಗುರುಗಳಿಗೆ, ಪೂಜಾರ್ಥದಲ್ಲಿ ಬಹುವಚನ.

**ಪೊಯ್ ಹೈಮುನಿ, ಪೂದತ್ತಾರ್, ಪೇಯಾಳ್ವಾರ್ ತಣ್ಪೊರು ನಲ್‌ನರುಂ ಕುರುಕೇಶರ್, ವಿಷ್ಣು ಶಿತ್ತನ್ ತುಯ್ಯ ಕುಲಶೇಖರರ್, ನಮ್ಪಾಣನಾರ್ತ್, ತೊಂಡರಡಿಪ್ಪೊಡಿ, ಮಙ್ಗೈವಂದ ಶೋತಿ ।**

---

**"ಗು" ಶಬ್ದಸ್ತ್ವಂಧಕಾರಸ್ಯಾತ್" "ರು" ಶಬ್ದಸ್ತನ್ನಿರೋಧಕಃ ।**
**ಅಂಧಕಾರನಿರೋಧಿತ್ವಾತ್ ಗುರುರಿತ್ಯಭಿಧೀಯತೇ ॥**

ಎಂಬುದು ಗುರುಶಬ್ದಕ್ಕೆ ನಿರ್ವಚನ. ಅದಾಗಿ ಅಜ್ಞಾನವೆಂಬ ಅಂಧಕಾರವನ್ನು (ಗುಶಬ್ದಾರ್ಥ.) ಹೋಗಲಾಡಿಸುವವನು (ರು ಶಬ್ದಾರ್ಥ) **"ಗುರು"** ಎಂದು ಹೇಳಲ್ಪಡುತ್ತಾನೆ.

**ತದ್ಗುರುಭ್ಯಶ್ಚ**-ಅವರ ಆಚಾರ್ಯ ಪರಂಪರೆಗೆ, **ನಮೋವಾಕಮ್** ನಮಃ ಎಂಬ ಮಾತನ್ನು **ಅಧೀಮಹೇ**-ಅಧ್ಯಯನ ಮಾಡುತ್ತೇವೆ ಪುನಃ ಪುನಃ ಹೇಳುತ್ತೇವೆ ಎಂದರ್ಥ. ಗ್ರಂಥ ಪರಿಸಮಾಪ್ತಿಗೆ ವಿಘ್ನಗಳು ಬಹಳ. ಅವುಗಳನ್ನು ಹೋಗಲಾಡಿಸಿಕೊಳ್ಳಲು ಗುರು ಪರಂಪರೆಗೆ ನಮಸ್ಕಾರವನ್ನು ಪುನಃ ಪುನಃ ಮಾಡುವುದೇ ಪರಿಹಾರ **ತದ್ಗುರುಭ್ಯಶ್ಚ** ಎಂದು ಭಗವಂತನ ಪರ್ಯಂತ ಗುರು ಪರಂಪರೆಗೆ ನಮಸ್ಕಾರ. ಆ ಭಗವಂತನು ಯಾರೆಂಬುದನ್ನು **ವೃಣೀಮಹೇಚ ತತ್ರಾದ್ಯೌ,** ಇತ್ಯಾದಿ ಉತ್ತರಾರ್ಧದಲ್ಲಿ ವಿವಕ್ಷಿಸುತ್ತಾರೆ. **ತತ್ರ** - ಆ ಗುರುಪರಂಪರೆಗೆ **ಆದ್ಯೌ**-ಆದಿಯಲ್ಲಿರುವ ಇಬ್ಬರು, **ಜಗತಾಂಪತೀ**-ಜಗತ್ತಿಗೆ ಸ್ವಾಮಿಗಳು. ಅವರುಗಳೇ, **ದಂಪತೀ**-ಪತಿಜಾಯಾರೂಪವಾದ ಮಿಥುನವು. ಅವರನ್ನು **ವೃಣೀಮಹೇ** (ಶರಣವಾಗಿ) ಆಶ್ರಯಿಸುತ್ತೇವೆ.

ಇಲ್ಲಿ **"ಜಗತಾಂ ಆದ್ಯೌ"** ಎಂದು ಅನ್ವಯಮಾಡಿ, ಆ ಪ್ರಥಮಾಚಾರ್ಯರಿಬ್ಬರೂ ಜಗತ್ತಿಗೆ **ಕಾರಣ** ಭೂತರು ಎಂದೂ ಹೇಳಬಹುದು ಅವರೇ **ಜಗತಾಂಪತೀ**-ಪ್ರಪಂಚಕ್ಕೆ ಸ್ವಾಮಿಗಳು. ಶೇಷಿತ್ವವು ಇಬ್ಬರಲ್ಲಿಯೂ ವ್ಯಾಸಜ್ಯ ವೃತ್ತಿಕ. ಅಂದರೆ ಇಬ್ಬರೊಡಗೂಡಿದ್ದುದು. ಇಬ್ಬರೂ ಪ್ರಪಂಚಕ್ಕೆ ಸ್ವಾಮಿಗಳಾದರೆ (ಈಶ್ವರರಾದರೆ) ದ್ವೈರಾಜ್ಯ ದೋಷವು (ಒಬ್ಬರ ಮಾತನ್ನು ಮತ್ತೊಬ್ಬರು ಕೇಳದೆ ಪರಸ್ಪರ ವಿರುದ್ಧವಾಗಿ ನಡೆದುಕೊಂಡು ರಾಜ್ಯಭಾರ ಮಾಡಿದರೆ ಉಂಟಾಗುವ ದೋಷ) ಬರುವುದಿಲ್ಲವೇ ಎಂದರೆ ಅದಕ್ಕೆ ಸಮಾಧಾನ **"ದಂಪತೀ"** ಎಂದು. ಅಂದರೆ ಪರಸ್ಪರ ಅನುಕೂಲವಾದ ಮನೋಭಾವವುಳ್ಳವರು. ಇಬ್ಬರೂ ಏಕಾಭಿಪ್ರಾಯರಾಗಿ, ಐಕರಸ್ಯಭಾವದಿಂದ ಪ್ರಪಂಚದ ಸೃಷ್ಟಿ, ಸ್ಥಿತಿ, ಸಂಹಾರ ಮೋಕ್ಷಪ್ರದತ್ವಾದಿಗಳನ್ನು ನಡೆಸುವವರು ಎಂದರ್ಥ. ಇದರಿಂದ ಕೇವಲ ನಾರಾಯಣನೇ ಜಗತ್ಕಾರಣಭೂತನು ಎಂದು ಹೇಳುವ ಮತ ಸರಿಯಲ್ಲ. ಲಕ್ಷ್ಮೀನಾರಾಯಣಾತ್ಮಕವಾದ ಮಿಥುನವೇ ಜಗತ್ತಿಗೆ ಕಾರಣಭೂತರೆಂಬುದು ಸಿದ್ಧಾಂತ. ಲಕ್ಷ್ಮಿಯು ನಾರಾಯಣನಿಗೆ ಸ್ವೇಚ್ಛೆಯಿಂದ ಶೇಷಳಾಗಿ, ವಿಶೇಷಣವಾಗಿದ್ದಾಳೆ. ಈ ವಿಶೇಷಣ ವಿಶಿಷ್ಟವಾದ ತತ್ತ್ವವು **"ದಂಪತೀ"** ಶಬ್ದದಿಂದ ನಿರೂಪಿಸಲ್ಪಡುತ್ತದೆ ಈ ಶ್ಲೋಕದಲ್ಲಿ **"ಆದ್ಯೌದಂಪತೀ"** ಎಂದು ತತ್ತ್ವವೂ **"ವೃಣೀಮಹೇ"** ಎಂದು ಶರಣಾಗತಿಯೂ (ಹಿತ) **"ಜಗತಾಂಪತೀ"** ಎಂದು ಕೈಂಕರ್ಯ ಪ್ರತಿಸಂಬಂಧಿಯೂ ತದಾಕ್ಷಿಪ್ತವಾಗಿ ಪುರುಷಾರ್ಥವೂ ಹೇಳಲ್ಪಡುತ್ತದೆ.

**ಆಳ್ವಾರ್‌ಗಳಲ್ಲಿ ಭಕ್ತಿ :**

**ಪೊಯ್ ಹೈಮುನಿ ಪೂದತ್ತಾರ್ ಇತ್ಯಾದಿ,** ಅನಂತರ ಮೇಘಗಳು ಸಮುದ್ರಜಲವನ್ನು ಹೀರಿ ಸರ್ವೋಪಜೀವ್ಯವಾದ ತಣ್ಣೀರಾಗಿ ಸುರಿಸುವಂತೆ, ವೇದಾರ್ಥಗಳನ್ನು ಸರ್ವಾಧಿಕಾರವಾದ ತಮಿಳು ಭಾಷೆಯಲ್ಲಿ ಸುಲಭವಾಗಿ ಎಲ್ಲರೂ ತಿಳಿದುಕೊಳ್ಳುವಂತೆ ದ್ರಾವಿಡ ಪ್ರಬಂಧ ರೂಪದಲ್ಲಿ ಅನುಗ್ರಹಿಸಿದ ಆಳ್ವಾರುಗಳನ್ನು ಅನುಸಂಧಾನ ಮಾಡುತ್ತಾರೆ, ಇವರ ಪ್ರಬಂಧಗಳು ಶರಣಾಗತಿ ಶಾಸ್ತ್ರಾರ್ಥವನ್ನು ವಿಶೇಷವಾಗಿ ವಿಶದೀಕರಿಸಿವೆ ಎಂಬ ವೈಶಿಷ್ಟ್ಯವೂ ಇದೆ.

**ವೈಯ್ಯವೆಲ್ಲಾ ಮರ್ಯೈವಿಳಂಗವಾಳ್ವೇಲೇಂದು ಮಂಗೈಯರ್ ಕೋನೆನ್ರಿವರಗಳ್ ಮಹಿೞನ್ನು ಪಾಡು ।
ಶೈಯ್ಯ ತಮಿೞ ಮಾಲೈಗಳ್ನಾಂ ತೆಳಿಯವೋದಿ, ತ್ತೆಳಿಯಾದ ಮರ್ಯೈನಿಲಂಗಳ್ ತೆಳಿಹಿನ್ರೋೕಮೇ ॥**

---

**ಪೊಯ್ ಹೈಮುನಿ**— ಸರೋವರದಲ್ಲಿ ಅವತರಿಸಿದ ಆಳ್ವಾರ್, **ಪೂದತ್ತಾರ್** - ಭೂತದಂತೆ ಭಗವದ್ವಿಷಯದಲ್ಲಿ ಲೀನರಾದ ಭೂದತ್ತಾಳ್ವಾರ್, **ಪೇಯಾೞ್ವಾರ್** - ಭಗವದ್ವಿಷಯದಲ್ಲಿ ಹುಚ್ಚು ಹಿಡಿದವರು, ತಲ್ಲೀನರು ಎಂದರ್ಥ.

**ತಣ್ಪೊರುನಲ್ವರುಂ ಕುರುಕೇಶನ್** — ಶೀತಳವಾದ ತಾಮ್ರ ಪರ್ಣಿ ನದೀ ತೀರದಲ್ಲಿ ಅವತರಿಸಿದ, ಕುರುಕಾಪುರಿಯ "ಅಧೀಶನಾದ ಆದಿಪ್ಪಿರಾನ್" ಅವತಾರಭೂತರಾದ ನಮ್ಮಾಳ್ವಾರ್, **ವಿಷ್ಣು ಚಿತ್ತನ್** - ವಿಷ್ಣು ಧ್ಯಾನಪರರಾದ ಪೆರಿಯಾಳ್ವಾರ್, **ತುಯ್ಯಕುಲಶೇಖರನ್** - ಭಾಗವತ ಭಕ್ತಿಯೆಂಬ ಪರಿಶುದ್ಧಿಯುಳ್ಳ ಕುಲಶೇಖರಾಳ್ವಾರ್, **ನಮ್ ಪಾಣನಾದನ್**, - ನಮ್ಮ ತಿರುಪ್ಪಾಣಾಳ್ವಾರ್ ತಿರುಪ್ಪಾಣಾಳ್ವಾರ್ರಿಗೆ ಮುನಿವಾಹನರೆಂಬ ಬಿರುದನ್ನೂ, ತಮಗೆ ವೇದಾಂತಾ ಚಾರ್ಯರ್ ಎಂಬ ಬಿರುದನ್ನೂ, ರಂಗನಾಥನು ದಯಪಾಲಿಸಿದುದರ ನಿಮಿತ್ತವಾಗಿ **ನಮ್** - ಎಂದು ಅವರೊಡನೆ ಸಂಬಂಧವನ್ನು ಬಯಸುತ್ತಾರೆ **ತೊಂಡರಡಿಪ್ಪೊಡಿ** - ಭಕ್ತರ ಪಾದಧೂಳಿ ಎಂದು ತಮ್ಮನ್ನು ವ್ಯಪದೇಶಿಸಿಗೊಳ್ಳುವ ಆಳ್ವಾರ್. **ಮೞಿಶೈವಂದ ಶೋದಿ**–ತಿರುಮೞಿಶೈ ಎಂಬ ಊರಿನಲ್ಲಿ ಅವತರಿಸಿದ ಜ್ಯೋತಿ ರೂಪರಾದ ಆಳ್ವಾರ್ ಒಂದು ಸಲ 'ಪೆರುಂಬುಲಿಯೂರ್' ಎಂಬ ಅಗ್ರಹಾದಲ್ಲಿ ನಡೆದಯಾಗದಲ್ಲಿ, ಯಾಗ ದೀಕ್ಷಿತರು ಮಹಾಜ್ಞಾನಿಯಾದ ಇವರಿಗೆ ಅಗ್ರ ಪೂಜೆಮಾಡಲು, ಶಿಶುಪಾಲಸಂಧಹ ಕೆಲವರು ಅದನ್ನು ಆಕ್ಷೇಪಿಸಲು, ಆಗ ಈ ಆಳ್ವಾರ್ರವರು ತಮ್ಮ ಹೃದಯದಲ್ಲಿ ಜ್ಯೋತಿ ಸ್ವರೂಪನಾದ ಭಗವಂತನನ್ನು ತೋರಿಸಿಕೊಡಲು, ಎಲ್ಲರೂ ಆಶ್ಚರ್ಯಪಟ್ಟು ಈ ಆಳ್ವಾರ್ರವರ ಪಾದಗಳಿಗೆ ನಮಸ್ಕರಿಸಿ ಅಪಚಾರಕ್ಷಾ ಮಪಣೆಯನ್ನು ಮಾಡಿಕೊಂಡರು ಎಂಬ ವೃತ್ತಾಂತವನ್ನು ಸೂಚಿಸಲು **ಮೞಿಶೈವಂದ ಶೋದಿ**, ಎಂದು ಸಂಬೊಧಿಸಿದ್ದಾರೆ.

**ವೈಯ್ಯಮೆಲ್ಲಾಂ ಮರ್ಯೈವಿಳಂಗ ವಾಳ್ವೇಲೇಂದುಮ್ ಮಂಗೈಯರ್ ಕೋನ್**-ಇಲ್ಲಿ ತಿರುಮಂಗೈಯಾಳ್ವಾರನ್ನು ಅನುಸಂಧಿಸಿದ್ದಾರ. ಇವರು ಸ್ತ್ರೀ ನಿಮಿತ್ತವಾಗಿ, ಪ್ರತಿದಿನವೂ ಕಾಡಿನ ದಾರಿಯಲ್ಲಿ ಬರುವವರ ಹತ್ತಿರ ಸಿಗುವ ಹಣ ಕಾಸುಗಳನ್ನು ನಿರ್ಬಂಧಿಸಿ ಕಿತ್ತುಕೊಂಡು ಬ್ರಾಹ್ಮಣ ಸಂತರ್ಪಣೆ ಮಾಡುತ್ತಿದ್ದರು. ಒಂದು ಸಲ ಇವರನ್ನು ಅನುಗ್ರಹಿಸಲು, ತಿರುವಾಲಿ ತಿರುನಗರಿಯಲ್ಲಿ ಅರ್ಚಾವತಾರದಿಂದ ಬಿಜಯ ಮಾಡಿಸಿರುವ ಭಗವಂತನು ಸರ್ವಾಭರಣಭೂಷಿತನಾಗಿ ಮಾರುವೇಷದಿಂದ ಇವರ ಎದುರಿಗೆ ತೋರಲು, ಈ ಆಳ್ವಾರ್ರವರು, ತಮ್ಮ ಕತ್ತಿಯನ್ನು ತೋರಿಸಿ ಹೆದರಿಸಿ, ಅವನ ಮೈಮೇಲೆ ಇದ್ದ ಆಭರಣಗಳನ್ನೆಲ್ಲಾ ಸಂತೋಷದಿಂದ ಕಳಚಿಕೊಂಡು, ಕಾಲಿನಲ್ಲಿ ಧರಿಸಿದ್ದ ಉಂಗುರವನ್ನು ಕೀಳಲು ಸಾಧ್ಯವಾಗದೆ, ಹಲ್ಲಿನಿಂದ ಕಚ್ಚಿ ಎಳೆದರು. ಆಗ ಭಗವಂತನ ಪಾದಾರವಿಂದ ಸ್ಪರ್ಶವಾಗಿ ಅಲ್ಲಿಂದ ಅಮೃತಧಾರೆಯು ಇವರ ಬಾಯಲ್ಲಿ ಬೀಳಲು, ದಿವ್ಯಜ್ಞಾನ ಉಂಟಾಗಿ, ತಾವು ಮಾಡಿದ ತಪ್ಪುಕೆಲಸಕ್ಕೆ ಶೋಚಿಸಿ, ಭಗವಂತನ ಸಾಕ್ಷಾತ್ಕಾರವನ್ನು ಪಡೆದು ಅವನನ್ನು "ವಾಡಿನೇನ್ ವಾಡಿ" ಎಂದಾರಂಭಿಸುವ ಪಾಶುರಗಳಿಂದ ಹಾಡಿದರು. ಇದೇ "ಪೆರಿಯತಿರುಮೊೞಿ" ಎಂದು ವ್ಯವಹರಿಸಲ್ಪಡುತ್ತದೆ. ಇದೇ ಮೊದಲಾದ ಪ್ರಬಂಧಗಳಿಂದ ಸಕಲ ವೇದಾಂತಾರ್ಥಗಳನ್ನೂ ಪ್ರತಿಪಾದಿಸಿರುತ್ತಾರೆ. ಹಾಗೆಯೇ ಸರ್ವಮಷ್ಟಾಕ್ಷರಾಂತಸ್ಥಂ" ಎಂದು ಹೇಳಲ್ಪಡುವ ಅಷ್ಟಾಕ್ಷರದ ಅರ್ಥವನ್ನು ತಮ್ಮ ಪ್ರಬಂಧಗಳಲ್ಲಿ ಪ್ರತಿಪಾದಿಸಿ, ವೇದವು ಉಜ್ವಲಿಸುವಂತೆ, ಅನುಗ್ರಹಿಸಿರುವುದನ್ನು ಸೂಚಿಸಲು, "ವೈಯ್ಯಮೆಲ್ಲಾಂ ಮರ್ಯೈವಿಳಂಗ" ಎಂದು ನಿರೂಪಿಸಿರುತ್ತಾರೆ. ಅಥವಾ ವೈಯ್ಯಮೆಲ್ಲಾ ಮರ್ಯೈವಿಳಂಗ" ಎಂಬ ಪದಗಳನ್ನು **"ಎನ್ರಿವರ್‌ಹಳ್ ಮಹಿೞನ್ನು ಪಾಡುಮ್"** ಎಂಬುದಕ್ಕೆ ವಿಶೇಷಣವಾಗಿಟ್ಟರೆ,